

ಕರ್ನಾಟಕ ಸರ್ಕಾರ

# ತಿಳಿ ಕನ್ನಡ

## ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕ





## ಹತ್ತನೆಯ ತರಗತಿ

೨೦೧೫

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ನಂ.4, 100 ಅಡಿ ವರ್ತುಲ ರಸ್ತೆ, ಬನಶಂಕರಿ,
ಮೂರನೆಯ ಹಂತ, ಬೆಂಗಳೂರು – 560 085

# ಪಠ್ಯಪುಸ್ತಕ ರಚನಾಸಮಿತಿ

**ಅಧ್ಯಕ್ಷರು**

**ಪ್ರೊ. ಸಿ. ಉಪೇಂದ್ರ ಸೋಮಯಾಜಿ,** ನಿವೃತ್ತ ಪ್ರಾಧ್ಯಾಪಕರು, ಚಿತ್ರಪಾಡಿ–ಸಾಲಿಗ್ರಾಮ, ಉಡುಪಿಜಿಲ್ಲೆ–576225

**ಸದಸ್ಯರು**

**ಶ್ರೀ. ವಿ.ಪಿ.ದಾರುಕಾರಾಧ್ಯ,** ರಾಜ್ಯ ಕನ್ನಡ ಸಂಪನ್ಮೂಲ ವ್ಯಕ್ತಿ, ೧೨೬೯, 'ಬೆನಕ', ಆರನೆಯ ಮುಖ್ಯರಸ್ತೆ, ಎ ಬ್ಲಾಕ್ ಎರಡನೆಯ ಹಂತ, ರಾಜಾಜಿನಗರ–ಬೆಂಗಳೂರು–೧೦

**ಶ್ರೀಮತಿ ವಿಜಯಲಕ್ಷ್ಮಿ,** ಮುಖ್ಯಶಿಕ್ಷಕಿ, ಎ.ಇ.ಎಸ್.ಪ್ರೌಢಶಾಲೆ, ೪ 'ಟಿ' ಬ್ಲಾಕ್, ಜಯನಗರ, ಬೆಂಗಳೂರು–೧೧

**ಡಾ॥ ಬಿ.ಪ್ರಕಾಶ,** ಕನ್ನಡ ಅಧ್ಯಾಪಕರು, ಎನ್.ಐ.ಟಿ.ಕೆ.ಪ್ರೌಢಶಾಲೆ, ಶ್ರೀನಿವಾಸನಗರ, ಸುರತ್ಕಲ್.

**ಶ್ರೀ. ಎ.ಭುಜಂಗಾಚಾರ್,** ಕನ್ನಡ ಭಾಷಾಶಿಕ್ಷಕರು, ಶ್ರೀ ಜ್ವಾಲಾಮಾಲಿನಿ ಪ್ರೌಢ ಶಾಲೆ, ಸಿಂಹನಗದ್ದೆ, ಬಸ್ತಿಮಠ, ನರಸಿಂಹರಾಜಪುರ ತಾಲೂಕು, ಚಿಕ್ಕಮಗಳೂರು ಜಿಲ್ಲೆ.

**ಶ್ರೀ. ಶಿವಯೋಗಿ.ಮ.ಬಿದರಿ,** ನಿವೃತ್ತ ಉಪನ್ಯಾಸಕರು, 'ಸುಮ್ಮನೆ' ಬಸವ ನಗರ, ಗೋಕಾಕ್.

**ಶ್ರೀ ಸುಂದರ ತೋಡಾರ್,** ಚಿತ್ರಕಲಾ ಶಿಕ್ಷಕರು, ಸರಕಾರಿ ಪ್ರೌಢಶಾಲೆ, ಗೋಳಮಜಲು,ಬಂಟ್ವಾಳ, ದ.ಕ ಜಿಲ್ಲೆ

**ಪರಿಶೀಲಕರು**

**ಡಾ.ಎಚ್.ಎಂ.ಮಹೇಶ್ವರಯ್ಯ,** ಕನ್ನಡ ಪ್ರಾಧ್ಯಾಪಕರು ಮತ್ತು ಡೀನ್, ಕಲಾನಿಕಾಯ, ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ.

*ಸಂಪಾದಕ ಮಂಡಳಿ ಸದಸ್ಯರು*

**ಪ್ರೊ. ಚಂದ್ರಶೇಖರ ಪಾಟೀಲ್,** ಸಾಹಿತಿಗಳು, ಸಂಕ್ರಮಣ ಪ್ರಕಾಶನ, ಎಲಚೇನಹಳ್ಳಿ, ಜೆ.ಪಿ. ನಗರ, ಬೆಂಗಳೂರು–೭೮

**ಡಾ. ಕೆ. ಮರುಳಸಿದ್ದಪ್ಪ,** ಸಾಹಿತಿಗಳು, ನಂ ೧೩೭, ೧೨ನೆಯ ಕ್ರಾಸ್, ಜೆ.ಪಿ. ನಗರ, ಬೆಂಗಳೂರು–೭೮

**ಡಾ. ಸಾ.ಶಿ. ಮರುಳಯ್ಯ,** ಸಾಹಿತಿಗಳು, ರಾಗಿಣಿ, ಹಂಪಿನಗರ, ಬೆಂಗಳೂರು.

**ಪ್ರೊ. ಅ.ರಾ.ಮಿತ್ರ,** ಸಾಹಿತಿಗಳು, ಕೆ.ಎಚ್.ಬಿ. ಕಾಲೋನಿ, ಯಲಹಂಕ, ಬೆಂಗಳೂರು.

**ಡಾ. ವಿಷ್ಣು ಎಂ. ಶಿಂದೆ,** ಸಹಾಯಕ ಪ್ರಾಧ್ಯಾಪಕರು, ಶಿಕ್ಷಣ ವಿಭಾಗ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ, ವಿಜಯಾಪುರ.

**ಮುಖ್ಯ ಸಂಯೋಜಕರು**

**ಪ್ರೊ. ಜಿ.ಎಸ್.ಮುಡಂಬಡಿತ್ತಾಯ,** ಪಠ್ಯವಸ್ತು ಪರಿಷ್ಕರಣೆ ಮತ್ತು ಪಠ್ಯಪುಸ್ತಕ ರಚನೆ, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫

*ಸಲಹೆ ಮತ್ತು ಮಾರ್ಗದರ್ಶನ*

**ಶ್ರೀ ನಾಗೇಂದ್ರ ಕುಮಾರ್,** ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫

**ಶ್ರೀ ಪಾಂಡುರಂಗ,** ಉಪನಿರ್ದೇಶಕರು (ಪ್ರಭಾರಿ), ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೫೬೦ ೦೮೫

**ಕಾರ್ಯಕ್ರಮ ಸಂಯೋಜಕರು**

**ಶ್ರೀ ಪಾಂಡುರಂಗ,** ಹಿರಿಯ ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು–೮೫

# ಮುನ್ನುಡಿ

೨೦೦೫ನೇ ರಾಷ್ಟ್ರೀಯ ಪಠ್ಯಕ್ರಮದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಕರ್ನಾಟಕ ಪಠ್ಯಪುಸ್ತಕ ಸಂಘವು ೨೦೧೦ ನೇ ಸಾಲಿನಿಂದ ಒಂದನೇ ತರಗತಿಯಿಂದ ಹತ್ತನೇ ತರಗತಿವರೆಗಿನ ಪಠ್ಯಪುಸ್ತಕಗಳ ರಚನಾ ಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಪುಸ್ತಕಗಳನ್ನು ಹಾಗೂ ಕೋರ್ ವಿಷಯಗಳನ್ನು ೭ ಮಾಧ್ಯಮಗಳಲ್ಲಿ ರಚನೆ ಮಾಡಲಾಗುತ್ತಿದೆ. ೧ ರಿಂದ ೪ ನೇ ತರಗತಿಯವರೆಗೆ ಪರಿಸರ ವಿಜ್ಞಾನ, ಗಣಿತ ಮತ್ತು ೫ ರಿಂದ ೧೦ ನೇ ತರಗತಿಯವರೆಗೆ ಕೋರ್ ವಿಷಯಗಳಾದ ಗಣಿತ, ವಿಜ್ಞಾನ ಮತ್ತು ಸಮಾಜ ವಿಜ್ಞಾನಗಳಿರುತ್ತವೆ.

**೨೦೦೫ರ ರಾಷ್ಟ್ರೀಯ ಪಠ್ಯಕ್ರಮವು ಈ ಕೆಳಗಿನ ವೈಶಿಷ್ಟ್ಯಗಳನ್ನು ಹೊಂದಿದೆ.**

- ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸುವುದು
- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು
- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರದೃಷ್ಟಿಯ ಬೋಧನೆಯನ್ನು ಅಳವಡಿಸುವುದು
- ಶಾಲೆಯ ಹೊರಗಿನ ಬದುಕಿಗೆ ಜ್ಞಾನವನ್ನು ಸಂಯೋಜಿಸುವುದು.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿ ಪಡಿಸುವುದು.



ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ (Integrated Approach), ರಚನಾತ್ಮಕ ವಿಧಾನ (Constructive Approach) ಹಾಗೂ ಸುರುಳಿಯಾಕಾರದ ವಿಧಾನ (Spiral Approach) ಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ, ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ ಭಾರತದ ಸ್ವಸ್ಥಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲ್ಯಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವ, ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲ್ಯಗಳ ಸಂವರ್ಧನೆಗೆ ಒಂದು ಪೂರಕವಸ್ತುವೆಂದು ಪರಿಗಣಿಸಲು,

ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ. ಮಿತ್ರರೊಂದಿಗೆ ಗುಂಪುಗಳಲ್ಲಿ ಚರ್ಚೆಯ ಮೂಲಕ ಅವರ ಅಭಿವ್ಯಕ್ತಿ ಹಾಗು ಸಂವಹನ ಕೌಶಲ್ಯಗಳ ಸಂವರ್ಧನೆಯೇ ಕಲಿಕೆ ಗುರಿಯೆಂದು ಅಂತಹ ಚಟುವಟಿಕೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಈ ರೀತಿಯ ಚಟುವಟಿಕೆಗಳು ಮಕ್ಕಳಲ್ಲಿ ಕಲಿಯುವ ಕಲೆ (learning to learn) ಹಾಗೂ ಕಲಿತುದುದನ್ನು ಜೀವನದಲ್ಲಿ ಅಳವಡಿಸುವ ಶಕ್ತಿ (learning to do) ಯನ್ನು ಮಕ್ಕಳಲ್ಲಿ ವೃದ್ಧಿಮಾಡುತ್ತದೆ. ಹತ್ತನೇ ತರಗತಿಯ ಪಠ್ಯಪುಸ್ತಕಗಳು ಒಂದು ದೃಷ್ಟಿಯಲ್ಲಿ ವೈಶಿಷ್ಟ್ಯಪೂರ್ಣವಾಗಿವೆ. ಇತರ ಪಠ್ಯಪುಸ್ತಕಗಳಂತೆಯೇ ಈ ಪಠ್ಯಪುಸ್ತಕಗಳು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಸಾಮರ್ಥ್ಯ ಹಾಗೂ ಕೌಶಲ್ಯಗಳನ್ನು ಬೆಳಸಿಕೊಳ್ಳಲು ಸಹಾಯ ಮಾಡುತ್ತವೆ. ಇದರೊಂದಿಗೆ ೧೦ನೇ ತರಗತಿ ಶಿಕ್ಷಣದ ಒಂದು ಹಂತದ ಅಂತ್ಯದಾಣವಾಗಿರುವುದರಿಂದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪಬ್ಲಿಕ್ ಪರೀಕ್ಷೆಯನ್ನು ಎದುರಿಸಬೇಕಾಗುತ್ತದೆ.

ಕರ್ನಾಟಕ ಪಠ್ಯಪುಸ್ತಕ ಸಂಘವು ಈ ಪುಸ್ತಕದ ತಯಾರಿಯಲ್ಲಿ ಸಹಕರಿಸಿದ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಕಲಾಕಾರರಿಗೆ, ಪರಿಶೀಲಕರಿಗೆ, ಸಂಯೋಜಕ ಅಧಿಕಾರಿಗಳಿಗೆ, ಶಿಕ್ಷಣ ಮಹಾವಿದ್ಯಾಲಯಗಳ ಸಿಬ್ಬಂದಿವರ್ಗದವರಿಗೆ, ಜಿಲ್ಲಾ ತರಬೇತಿ ಸಂಸ್ಥೆಗಳು, ರಾಜ್ಯ ಮಟ್ಟದ ಪಠ್ಯಪುಸ್ತಕ ಸಂಪಾದಕ ಮಂಡಳಿಯ ಸದಸ್ಯರಿಗೆ ಮತ್ತು ಪುಸ್ತಕವನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ತನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಕೆಲವು ಸಾಹಿತಿಗಳು ಹಾಗೂ ಕವಿಗಳ ಕೃತಿಗಳನ್ನು ಈ ಪಠ್ಯಪುಸ್ತಕಗಳಲ್ಲಿ ಅಳವಡಿಸಲಾಗಿದೆ. ಈ ವಿಚಾರದಲ್ಲಿ ತಮ್ಮ ಒಪ್ಪಿಗೆಯನ್ನು ನೀಡಿರುವ ಬರಹಗಾರರಿಗೆ ಹಾಗೂ ಕವಿಗಳಿಗೆ ಪಠ್ಯಪುಸ್ತಕ ಸಂಘ ಆಭಾರಿಯಗಿದೆ.

**ಪ್ರೊ. ಜಿ. ಎಸ್. ಮುಡಂಬಡಿತ್ತಾಯ**
ಮುಖ್ಯ ಸಂಯೋಜಕರು
ಪಠ್ಯವಸ್ತು ಪರಿಷ್ಕರಣೆ ಹಾಗೂ ಪಠ್ಯಪುಸ್ತಕ ರಚನೆ
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

**ನಾಗೇಂದ್ರ ಕುಮಾರ್**
ವ್ಯವಸ್ಥಾಪಕ ನಿರ್ದೇಶಕರು
ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.)
ಬೆಂಗಳೂರು

# ನಿಮ್ಮೊಂದಿಗೆ....

ಆಗಾಗ ಪಠ್ಯಪುಸ್ತಕಗಳು ಬದಲಾಗುತ್ತಲೇ ಇರಬೇಕು. ಶಿಕ್ಷಕರ ಬೌದ್ಧಿಕ ಬೆಳವಣಿಗೆಯ ದೃಷ್ಟಿಯಿಂದ ಮಾತ್ರವಲ್ಲ, ಬದಲಾಗುತ್ತಿರುವ ಸಾಮಾಜಿಕ ಸ್ಥಿತ್ಯಂತರಕ್ಕೆ, ತಕ್ಕಂತೆಯೂ ಪುನಾರಚನೆಯ ಅಗತ್ಯ ಇದೆ. ವಿಜ್ಞಾನಕ್ಷೇತ್ರದಲ್ಲಿ ಹೊಸಹೊಸ ಆವಿಷ್ಕಾರಗಳಾಗುತ್ತಿರುತ್ತವೆ. ಹೊಸ ಸಿದ್ಧಾಂತಗಳು ಜನರ ಮನೋಭಾವನೆಯನ್ನು ಬದಲಿಸುತ್ತಿರುತ್ತವೆ; ಅನೇಕ ಮೌಲ್ಯಗಳ ಅರ್ಥಗ್ರಹಣದಲ್ಲಿ, ಅವುಗಳಿಗೆ ವ್ಯಾಖ್ಯಾನ ನೀಡುವಲ್ಲಿ ಹಳೆಯ ಅರ್ಥವ್ಯಾಪ್ತಿಯನ್ನು ಅಲ್ಲಗಳೆಯುತ್ತಿದ್ದೇವೆ; ಹೊಸ ಆಲೋಚನೆಗಳನ್ನು ತುಂಬಿಕೊಳ್ಳುತ್ತಿರುತ್ತೇವೆ; ಹಿರಿಯರ ಕಿರಿಯರ ನಡುವಣ ಹೊಂದಾಣಿಕೆ ಶಿಥಿಲಗೊಳ್ಳುತ್ತಿರುತ್ತವೆ. ಈ ಎಲ್ಲದರ ಮರುಸ್ಥಾಪನೆಯ ಕಾರ್ಯದಲ್ಲಿ ಹೊಸ ಪಠ್ಯಪುಸ್ತಕಗಳು ನೆರವಾಗಬೇಕು.

ಕನ್ನಡವನ್ನು ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡುವವರಿಗೆ ಅದು ಕಷ್ಟವಾಗಿರದೆ, ಖುಷಿಕೊಡುವ ವಿಷಯವೂ ಆಗಿರಬೇಕು; ಮನೆಯ ಹಿರಿಯರೂ ಪಾಠಗಳನ್ನು ಅರ್ಥಮಾಡಿಕೊಂಡು ಮಕ್ಕಳಿಗೆ ಮಾರ್ಗದರ್ಶನ ಮಾಡುವಂತಾಗಬೇಕು; ಪಾಠದ ಕೊನೆಯಲ್ಲಿ ಕೊಟ್ಟಿರುವ ಚಟುವಟಿಕೆಗಳು ಮಕ್ಕಳ ಜ್ಞಾನವಿಸ್ತಾರವನ್ನು ಹೆಚ್ಚಿಸಬೇಕು; ಪಾಠದೊಳಗಣ ಜೀವನಮೌಲ್ಯಗಳನ್ನು ಅರಿತು ಆ ಬಗ್ಗೆ ಪ್ರಜ್ಞಾವಂತರಾಗಬೇಕು ಎಂಬ ದೂರಗಾಮಿ ಗುರಿಯೊಂದಿಗೆ ಈ ಪಠ್ಯಪುಸ್ತಕದಲ್ಲಿ ಪಾಠಗಳನ್ನು ಕಟ್ಟಿಕೊಟ್ಟಿದ್ದೇವೆ. ಸತ್ವವನ್ನೇ ಅರಸುವ ಸಹೃದಯರಿಗೆ ಈ ಪುಸ್ತಕವು ನಿಶ್ಚಯವಾಗಿಯೂ ರುಚಿಸುತ್ತದೆ ಎಂದು ಭಾವಿಸಿದ್ದೇವೆ.

ಶಿಕ್ಷಕರಲ್ಲಿ ಒಂದು ಕೋರಿಕೆ. ಪ್ರತಿ ಪಾಠದ ಕೊನೆಯಲ್ಲಿರುವ ಚಟುವಟಿಕೆಗಳನ್ನು ಶಿಸ್ತುಬದ್ಧವಾಗಿ ಮುಗಿಸುವ ಹೊಣೆಗಾರಿಕೆಯು ನಿಮ್ಮಮೇಲಿದೆ. ಅದಕ್ಕಾಗಿ ಮಕ್ಕಳಿಗೆ ಸೂಕ್ತಮಾರ್ಗದರ್ಶನ ನೀಡಿ. ಅವಕಾಶಗಳನ್ನು ಕಲ್ಪಿಸಿಕೊಡಿ. ಮಾಡಲೇಬೇಕಾದ ಅನಿವಾರ್ಯತೆಯ ಬಗ್ಗೆ ಮಕ್ಕಳನ್ನು ಪ್ರೇರೇಪಿಸಿ. ಇದರಿಂದ ಅವರ ವೈಯಕ್ತಿಕ ಬೆಳವಣಿಗೆ ಸಾಧ್ಯವಾಗುತ್ತದೆ. ಅವರು ಭವಿಷ್ಯದಲ್ಲಿ ನಾಯಕರಾಗಿಯೊ, ಸಹಾಯಕರಾಗಿಯೊ ಕಾರ್ಯಗಳನ್ನು ಯೋಜಿಸಲು, ಸ್ವತಂತ್ರವಾದ ನಿರ್ಣಯವನ್ನು ತೆಗೆದುಕೊಳ್ಳಲು ಸಾಧ್ಯವಾಗುತ್ತದೆ. ಇಂತಹ ಚಟುವಟಿಕೆಗಳಿಂದ ಬೋಧನೆ ಮತ್ತು ಕಲಿಕೆಯಲ್ಲಿಯ ಯಾಂತ್ರಿಕತೆ ದೂರವಾಗುತ್ತದೆ. ಅವು ಮಕ್ಕಳಲ್ಲಿ ಪರಸ್ಪರ ಸಹಕರಿಸುವ ಮನೋಭಾವವನ್ನು ಬೆಳೆಸುತ್ತವೆ. ಆರೋಗ್ಯಕರ ಸ್ಪರ್ಧೆಯಿಂದ ಕಲಿಕೆಯಲ್ಲಿ ವೇಗಸಂವರ್ಧನೆ ಆಗುತ್ತದೆ. ಗೆಲುವಿಗಾಗಿ ಹಾತೊರೆಯುವ ಹಾಗೆಯೇ ಸೋಲು ಬಂದಾಗ ಅದನ್ನು ಸ್ವೀಕರಿಸುವ ಮನೋಭಾವನೆಯೂ ಬೆಳೆಯುತ್ತದೆ. 'ಹೆಚ್ಚಿನ ಓದಿನ ಭಾಗ'ವನ್ನು ಮಕ್ಕಳಲ್ಲಿ ಸ್ವತಂತ್ರವಾಗಿ ಓದಿ ಅರ್ಥ ಮಾಡಿಕೊಳ್ಳುವಂತೆ ನೀಡಲಾಗಿದೆ. ಇದು ಪರೀಕ್ಷೆಗಾಗಿ ಅಲ್ಲ.

ವ್ಯಾಕರಣದ ವಿಷಯದಲ್ಲಿ ನಾವು ಸೂತ್ರಕ್ಕೆ, ನಿಯಮಕ್ಕೆ ಹೆಚ್ಚು ಬದ್ಧರಾಗಿರದೆ, ಎಷ್ಟುಬೇಕು, ಏಕೆ ಬೇಕು, ಹೇಗಿರಬೇಕು, ಔಚಿತ್ಯ, ಅಗತ್ಯ ಇವುಗಳಿಗಷ್ಟೇ ಮಹತ್ವವನ್ನು ಕೊಟ್ಟಿದ್ದೇವೆ. ಪಠ್ಯಾಧಾರಿತ ಪ್ರಶ್ನೆಗಳನ್ನಷ್ಟೇ ಅಲ್ಲ, ಮಕ್ಕಳು ಯೋಚಿಸುವ, ತರ್ಕಿಸುವ, ನಿರ್ಣಯಿಸುವ, ಒಳ್ಳೆಯದನ್ನು ಗುರುತಿಸುವಂತಹ ಪ್ರಶ್ನೆಗಳನ್ನೂ ನೀಡಿದ್ದೇವೆ. ದ್ವಿತೀಯ ಭಾಷೆಯನ್ನಾಗಿ ಕನ್ನಡವನ್ನು ಕಲಿಯುವ ಮಕ್ಕಳು ಇಂತಹ ಸಾಮರ್ಥ್ಯದಲ್ಲೂ ಪರಿಣಿತರಾಗಬೇಕು.

ಇಂತಹದೊಂದು ಪುಸ್ತಕವನ್ನು ರಚಿಸಲು ತಜ್ಞರ ಸಮಿತಿಯೊಂದನ್ನು ರಚಿಸಿದ ಕರ್ನಾಟಕ ಪಠ್ಯಪುಸ್ತಕ ಸಂಘ (ರಿ.) ಇವರು ಅಭಿನಂದನಾರ್ಹರು. ಅಲ್ಲಲ್ಲಿ ಹೊಸತನದ ಹೊಳಹು ಕಾಣಿಸಿದರೆ ಅದಕ್ಕೆ ಸಂಯೋಜಕರಾಗಿರುವ ಪ್ರೊ.ಜಿ.ಎಸ್.ಮುಡಂಬಡಿತ್ತಾಯರ ಪ್ರೇರಣೆ, ಮಾರ್ಗದರ್ಶನ ಕಾರಣ. ಈ ಪಠ್ಯಪುಸ್ತಕವನ್ನು ಅರ್ಥಪೂರ್ಣವಾಗುವಂತೆ ಸಂಪಾದಿಸಲು ಕಾರಣರಾದವರು ನಮ್ಮ ಸಮಿತಿಯ ಸದಸ್ಯರು. ಅನುಮಾನ ಮೂಡಿದಾಗಲೆಲ್ಲ ಚರ್ಚಿಸಿ ಸೂಕ್ತವಾದುದನ್ನು ಅಳವಡಿಸುವಲ್ಲಿ ಅವರ ಸಹಕಾರ ಉಲ್ಲೇಖನೀಯ. ಈ ಪುಸ್ತಕದ ಪರಿಶೀಲಕರಾಗಿರುವ ಡಾ॥ ಎಚ್.ಎಂ. ಮಹೇಶ್ವರಯ್ಯ ಅವರ ಸಹಕಾರ – ಸಲಹೆಗಳು ಇದನ್ನು ಸರ್ವಾಂಗಸುಂದರವಾಗಿಸಿದೆ. ಕಾರ್ಯಕ್ರಮ ಸಂಯೋಜಕರಾಗಿರುವ ಶ್ರೀ ಪಾಂಡುರಂಗ ಅವರ ಸಹಕಾರ ಮರೆಯಲಾರದುದು. ಸಮಷ್ಟಿ ಹೊಣೆಗಾರಿಕೆಯಿಂದ ರಚನೆಗೊಂಡ ಈ ಪಠ್ಯಪುಸ್ತಕವು ಇದೀಗ ನಿಮ್ಮ ಕೈಯಲ್ಲಿದೆ. ಮಕ್ಕಳ ಸರ್ವಾಂಗೀಣ ಬೆಳವಣಿಗೆಗೆ ಇಲ್ಲಿಯ ಪಾಠ, ಅಭ್ಯಾಸ, ಚಟುವಟಿಕೆಗಳೆಲ್ಲವೂ ತೋರುಬೆರಳು ಮಾತ್ರ. ನಮ್ಮ ಕೆಲಸ ಇಲ್ಲಿಗೆ ಮುಗಿಯಿತು. ಇನ್ನುಳಿದ ಹೊಣೆಗಾರಿಕೆ ನಿಮ್ಮದು.

**ಪ್ರೊ..ಸಿ.ಉಪೇಂದ್ರ ಸೋಮಯಾಜಿ,**
**ಅಧ್ಯಕ್ಷರು,**
**ಪಠ್ಯಪುಸ್ತಕ ರಚನಾಸಮಿತಿ**

# ಪರಿವಿಡಿ


| ಕ್ರ.ಸಂ. | ಗದ್ಯಭಾಗ | | ಪು.ಸಂ. |
|---|---|---|---|
| ೧. | ಒಣಮರದ ಗಿಳಿ | ಅ.ರಾ. ಮಿತ್ರ | ೦೧ |
| ೨. | ರಾಹುಲ್ ದ್ರಾವಿಡ್ | ಸಂಪಾದಿತ | ೦೮ |
| ೩. | ಗಾನಯೋಗಿ ಪಂಡಿತ ಪುಟ್ಟರಾಜ ಗವಾಯಿ | ಸಂಪಾದಿತ | ೧೫ |
| ೪. | ಪಶ್ಚಿಮ ಘಟ್ಟಗಳ ಪತನ | ನಾಗೇಶ ಹೆಗಡೆ | ೨೪ |
| ೫. | ಎಲ್ಲಿ ಹೋಗ್ಯಾವೊ ಆ ಕಾಲ | ಗುರುರಾಜ ಕರಜಗಿ | ೩೨ |
| ೬. | ಶಿಷ್ಯವತ್ಸಲ ರಾಮನ್ | ಬಿ.ಪಿ. ರಾಧಾಕೃಷ್ಣ | ೩೯ |
| ೭. | ನನ್ನಗೋಪಾಲ | ಕುವೆಂಪು | ೪೬ |
| | ಪದ್ಯಭಾಗ | | |
| ೧. | ಅರಿವು | ಸುಕನ್ಯಾ ಮಾರುತಿ | ೫೪ |
| ೨. | ನನ್ನ ಹಾಗೆಯೆ | ಸು.ರಂ.ಎಕ್ಕುಂಡಿ | ೫೮ |
| ೩. | ಸವಿಚೈತ್ರ | ಬಸವರಾಜ ಸಾದರ | ೬೩ |
| ೪. | ಸದ್ದುಮಾಡದಿರು | ಸಿ.ಪಿ.ಕೆ. | ೬೮ |
| ೫. | ಗುರಿ | ಎಂ.ಗೋಪಾಲಕೃಷ್ಣ ಅಡಿಗ | ೭೨ |
| ೬. | ಮಗು | ಜನಪದರು | ೭೬ |
| ೭. | ವಚನಗಳು | ವಚನಕಾರರು | ೭೯ |
| ೮. | ನಿಟ್ಟೋಟದಲಿ ಹಾಯ್ದನು ಬಿಟ್ಟಮಂಡೆಯಲಿ | ಗದುಗಿನ ನಾರಣಪ್ಪ | ೮೩ |
| | ಪೂರಕ ಓದು | | |
| ೧. | ಜೋಯಿಸರ ಕುರ್ಚಿ | ಬೆಳಗೋಡು ರಮೇಶ ಭಟ್ | ೯೦ |
| ೨. | ಒಂದು ದಿನ ಹೀಗಾಗಿತ್ತು | ನಿರ್ಮಲಾ | ೯೫ |
| ೩. | ಪಠ್ಯಾಧಾರಿತ ಪದಕೋಶ | ----- | ೯೮ |

ಗದ್ಯಭಾಗ

# ಗದ್ಯಪಾಠ – ೦೧

# ಒಣಮರದ ಗಿಳಿ

– ಅ. ರಾ. ಮಿತ್ರ

**ಪಾಠ ಪ್ರವೇಶ :** ನೆಮ್ಮದಿಯ ನಾಳೆಗಾಗಿ ಇಂದೇ ನಾವು ಒಳಿತಿನ ಹಲವನ್ನು ಕಲಿಯಬೇಕು. ಈ ಕಲಿಕೆಯು ಓದಿನಿಂದ, ಕೇಳುವಿಕೆಯಿಂದ, ಸಮಾಜದಿಂದ, ಪ್ರಕೃತಿಯಿಂದ, ಪ್ರಾಣಿ–ಪಕ್ಷಿಗಳಿಂದ ಲಭ್ಯವಾಗುತ್ತದೆ. ಹಾಗಾಗಬೇಕಾದರೆ ಸಕಾರಾತ್ಮಕವಾಗಿ ಚಿಂತಿಸುವ ಒಳಗಣ್ಣು ಬೇಕು. ಹಾಗೆ ಕಲಿತುದುದನ್ನು ಬದುಕಿನಲ್ಲಿ ಅಳವಡಿಸಿಕೊಂಡಾಗ ಪಡೆದ ಶಿಕ್ಷಣಕ್ಕೆ ಸಾರ್ಥಕತೆ ಸಿಕ್ಕಂತಾಗುತ್ತದೆ. ಪ್ರಕೃತ ಪಾಠದಲ್ಲಿ ಗಿಳಿಯೊಂದರ ಕೃತಜ್ಞತಾಭಾವವು ಸುಂದರವಾಗಿ ಚಿತ್ರಿತವಾಗಿದೆ. ಪ್ರಕೃತಿಯನ್ನು ಪ್ರೀತಿಸಬೇಕು; ಪ್ರೀತಿಸುತ್ತಿರುವುದರ ಸಂಕೇತವಾಗಿ ನಮ್ಮ ಪರಿಸರವನ್ನು ಸದಾ ಸಸ್ಯ ಸಮೃದ್ಧವಾಗಿರುವಂತೆ ಇರಿಸಿಕೊಳ್ಳಬೇಕು; ನಮ್ಮ ಸರ್ವಾಂಗೀಣ ಬೆಳವಣಿಗೆಗೆ ಕಾರಣಕರ್ತರಾದ ಎಲ್ಲರನ್ನೂ, ಎಲ್ಲವನ್ನೂ ಕೃತಜ್ಞತೆಯಿಂದ ಗೌರವಿಸಬೇಕು ಎಂಬ ಸಂದೇಶ ಇಲ್ಲಿದೆ.

ಕಾಶಿಯಲ್ಲಿ ಒಬ್ಬ ಬೇಡನಿದ್ದ. ಅವನು ಎಂದಿನಂತೆ ಬೇಟೆಯಾಡಲು ಹೊರಟ. ಪ್ರಾಣಿಗಳನ್ನು ಕೊಲ್ಲಲು ಅವನು ವಿಷ ಸವರಿದ ಬಾಣಗಳನ್ನು ಸಿದ್ಧಮಾಡಿಕೊಂಡಿರುತ್ತಿದ್ದ. ಈ ಬಾಣ ತಗುಲಿದ ಕೂಡಲೇ ಜಿಂಕೆ ನಂಜಾಗಿ ಸಾಯುತ್ತಿತ್ತು. ಬೇಟೆಗಾರನು ಕಣ್ಣಿಗೆ ಬಿದ್ದ ಒಂದು ಜಿಂಕೆಯನ್ನು ಬೆನ್ನಟ್ಟಿದ್ದ. ಅದು ಬಾಣಕ್ಕೆ ಗುರಿಯಾಗುವಷ್ಟು ದೂರಕ್ಕೆ ಬಂದಾಗ ವಿಷಯುಕ್ತ ಬಾಣವನ್ನು ಎಳೆದು ಬಿಟ್ಟ. ಆದರೆ ಜಿಂಕೆ ಹಾರಿ ತಪ್ಪಿಸಿಕೊಂಡಿತು. ಆ ಬಾಣವು ಒಂದು ಮರಕ್ಕೆ ತಾಕಿತು. ವಿಷದ ಪ್ರಭಾವದಿಂದ ಆ ಮರ ಒಣಗಿ ನಿಂತಿತು. ಅದರ ಪುಷ್ಪಸಮೃದ್ಧಿ, ಫಲಸಮೃದ್ಧಿ, ಹಸಿರಿನ ಸಿರಿ ಎಲ್ಲವೂ ಮಾಯವಾದವು. ಅಲ್ಲಿ ಬಹುಕಾಲದಿಂದ ಒಂದು ಗಿಳಿ ವಾಸ ಮಾಡುತ್ತಿತ್ತು. ಮರ ಒಣಗಿ ನಿಂತರೂ ಗಿಳಿ ಆ ಮರದ ಪೊಟರೆಯನ್ನು ಬಿಟ್ಟು ಹೋಗಲಿಲ್ಲ. ಅಲ್ಲಿ ಸಂಚರಿಸುತ್ತಿದ್ದ ಇಂದ್ರ ಇದನ್ನು ನೋಡಿದ. ಅವನಿಗೆ ಆಶ್ಚರ್ಯವಾಯಿತು. ಗಿಳಿಯನ್ನು ಕರೆದು ಇಂಥ ಒಣಮರದಲ್ಲಿ ಏಕೆ ವಾಸ ಮಾಡುತ್ತಿದ್ದೀ ಎಂದು ಕೇಳಿದ. ಆ ಗಿಳಿ ಹೇಳಿತು:

"ಹಲವಾರು ವರ್ಷದಿಂದ ಈ ಮರ ನನಗೆ ಆಶ್ರಯ ಕೊಟ್ಟಿದೆ, ಹಣ್ಣು ಕೊಟ್ಟಿದೆ, ಹಸಿರು ಬಣ್ಣದಿಂದ ಮನಸ್ಸಿಗೆ ಮುದ ನೀಡಿದೆ, ನೆರಳು ನೀಡಿದೆ, ಆದರೆ ಈಗ ದುರದೃಷ್ಟದಿಂದ ಅದನ್ನು ರೋಗ, ಬಡತನಗಳು ಕಿತ್ತು ತಿನ್ನುತ್ತಿವೆ. ಹಾಗೆಂದು ಈ ಸ್ಥಿತಿಯಲ್ಲಿ ನಾನು ಅದನ್ನು ಕೈಬಿಟ್ಟು ಬೇರೆ ಕಡೆ ಹೋಗಿ ಆ ಮರಕ್ಕೆ ಕೃತಘ್ನನಾಗಲೆ? ನಾನು ಎಲ್ಲೋ ಹೋಗಿ ಆಹಾರವನ್ನು ಸಂಪಾದಿಸಿಕೊಂಡು ಬರುತ್ತೇನೆ. ಆದರೆ ವಾಸ ಮಾತ್ರ ಇಲ್ಲೆ. ಸುಖ ಸಂಪತ್ತಿನ ಕಾಲದಲ್ಲಿ ಜತೆಗಿದ್ದವರು ದುರ್ಭರಗಳಿಗೆಯಲ್ಲಿ ಕೂಡ ಅವರ ಜೊತೆಗೇ ಇದ್ದು ಉಪಕಾರಸ್ಮರಣೆ ಮಾಡಬೇಕು. ಅದಕ್ಕೂ ಒಳ್ಳೆಯ ದಿನ ಬರಲಿ ಎಂದು ಹಾರೈಸಬೇಕು."

ಇಂದ್ರನಿಗೆ ತುಂಬ ಸಂತೋಷವಾಯಿತು. ಗಿಳಿಯ ನಡತೆ ಕೂಡ ಲೋಕವರ್ತನೆಗೆ ವಿರುದ್ಧವಾಗಿದೆ ಎಂದುಕೊಂಡ. ಆ ಗಿಳಿಯ ತತ್ತ್ವನಿಷ್ಠೆಯನ್ನು ಮೆಚ್ಚಿಕೊಂಡ. ಮನುಷ್ಯನ ಬದುಕಿಗೆ ಈ ಸೂತ್ರ ಮಾದರಿಯಾಗಬಲ್ಲದು ಎಂದುಕೊಂಡ. ಹೀಗೆ ಪರಹಿತಾಕಾಂಕ್ಷಿಯಾಗಿರುವ ಗಿಳಿರಾಯನಿಗೆ ಏನಾದರೂ ವರವನ್ನು ಕೊಡಬೇಕು ಎಂದು ತೀರ್ಮಾನಿಸಿದ. ಅದರ ಶ್ರದ್ಧೆಯನ್ನು ಮೆಚ್ಚಿ "ಏನಾದರೂ ವರವನ್ನು ಕೇಳು. ಕೊಡುತ್ತೇನೆ" ಎಂದ. ಅದು ಎಂಥ ಜನ್ಮ ಬಯಸಿದ್ದರೂ, ಎಂಥ ಭೋಗವನ್ನು ಬಯಸಿದ್ದರೂ ಕೊಡಲು ಅವನು ಸಿದ್ಧನಾಗಿದ್ದ. ಆದರೆ ಆ ಗಿಳಿ ಕೇಳಿದ್ದು ಏನು ಗೊತ್ತೆ?

**ಸುವಿಚಾರಧಾರೆಗಳು ಎಲ್ಲೆಡೆಯಿಂದ ಹರಿದುಬರಲಿ – ವೇದ**

"ದೇವರಾಜ, ವರವನ್ನು ಕೊಡುವ ಇಚ್ಛೆ ಇದ್ದರೆ ಈ ಮರಕ್ಕೆ ಮೊದಲಿನಂತೆ ಹಸಿರಿನಿಂದ ಕಳಕಳಿಸುವ, ಫಲಪುಷ್ಪ ಭಾರದಿಂದ ಬೀಗುವ, ನೆರಳು ಕೊಡುವ ವರವನ್ನು ದಯಪಾಲಿಸು! "ಅದರ ಈಗಿನ ಅವಸ್ಥೆಯನ್ನು ನಾನು ನೋಡಲಾರೆ."

## ಲೇಖಕರ ಪರಿಚಯ



**ಅ.ರಾ. ಮಿತ್ರ** ೧೯೩೫ರಲ್ಲಿ ಜನಿಸಿದ ಇವರು ಕನ್ನಡದಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ಮುಗಿಸಿ ೧೪ ವರ್ಷ ಉಪನ್ಯಾಸಕರಾಗಿ, ಬಳಿಕ ರೀಡರ್, ಪ್ರೊಫೆಸರ್, ಪ್ರಿನ್ಸಿಪಾಲರಾಗಿ ವಿವಿಧ ಕಡೆಗಳಲ್ಲಿ ಸೇವೆ ಸಲ್ಲಿಸಿದರು. ಸಾಹಿತ್ಯಕ್ಷೇತ್ರದಲ್ಲೂ ಇವರ ಸಾಧನೆ ಅಸಾಮಾನ್ಯ. ಆರತಕ್ಷತೆ ಮತ್ತು ಇತರ ಪ್ರಬಂಧಗಳು, ನಾನೇಕೆ ಕೊರೆಯುತ್ತೇನೆ ಮತ್ತು ಇತರ ಪ್ರಬಂಧಗಳು (ಲಲಿತ ಪ್ರಬಂಧ), ಕನ್ನಡ ಛಂದಸ್ಸಿನ ಕುರಿತಾದ ಛಂದೋಮಿತ್ರ, ಭಾಮಿನೀ ಷಟ್ಪದಿಯಲ್ಲಿ ಕನ್ನಡ ಮೇಘದೂತ, ಮಹಾಭಾರತ ಪಾತ್ರ–ಸಂಗತಿಗಳು, ವಚನಕಾರರು ಮತ್ತು ಶಬ್ದಕಲ್ಪ, ಒಳನೋಟಗಳು, ಕವಿಗಳ ಬೆನ್ನೇರಿ, ಕೈಲಾಸಂ ಬದುಕು–ಬರಹ ಇತ್ಯಾದಿ ಕೃತಿಗಳನ್ನು ರಚಿಸಿದವರು. ಕುಮಾರವ್ಯಾಸ ಭಾರತದ ಗಮಕದ ೨೫ ಅಡಕ ಮುದ್ರಿಕೆಯಲ್ಲಿಯ ವ್ಯಾಖ್ಯಾನಕಾರರು.

ಪ್ರಕೃತ ಪಾಠವನ್ನು ಸುಮಾರು ೨೫೫ ಪಾತ್ರ ಪ್ರಸಂಗಗಳ ಉಲ್ಲೇಖ ಇರುವ **'ಮಹಾಭಾರತ(ವ್ಯಾಸ) ಪಾತ್ರ–ಸಂಗತಿಗಳು'** ಪುಸ್ತಕದಿಂದ ಆರಿಸಲಾಗಿದೆ.



## ಅರ್ಥ ತಿಳಿಯಿರಿ

**ಸಮೃದ್ಧಿ** – ಸಂಪತ್ತು, ಏಳಿಗೆ. **ಸಿರಿ** – ಸಂಪತ್ತು, ಶ್ರೀ(ಸಂ) **ಪೊಟರೆ** – ಮರದೊಳಗಣ ಟೊಳ್ಳಾದ ಭಾಗ. **ಆಶ್ಚರ್ಯ** (ತ್ಸ) – ಬೆರಗು, ಅಚ್ಚರಿ (ತ್ಭ) **ಆಶ್ರಯ** – ಆಸರೆ (ತದ್ಭವ), ಅವಲಂಬನ. **ಮುದ** – ಹಿಗ್ಗು, ಆನಂದ. **ದುರದೃಷ್ಟ** – ಕೆಟ್ಟ ಅದೃಷ್ಟ, **ಕೃತಘ್ನ**–ಉಪಕಾರ ಸ್ಮರಣೆ ಇಲ್ಲದವನು. **ದುರ್ಭರ** – ಧರಿಸಲಾಗದುದು, ಹೊರಲಾಗದುದು. **ಗಳಿಗೆ** –೨೪ ನಿಮಿಷಗಳ ಕಾಲ. **ಘಟಿಕಾ** (ಸಂ) ಸಂತೋಷ **(ಸಂ)** – ಸಂತಸ (ತದ್ಭವ). **ಲೋಕವರ್ತನೆ** – ಲೋಕದ ಜನರ ನಡವಳಿಕೆ. **ಪರಹಿತಾಕಾಂಕ್ಷೆ** – ಇನ್ನೊಬ್ಬರ ಒಳಿತನ್ನು ಬಯಸುವವ. **ವರ**–ಕೊಡುಗೆ. **ಭೋಗ**–ಸುಖದ ಅನುಭವ. **ಕಳಕಳಿಸು** – ಮಧುರ ದನಿಗಳಿಂದ ಕೂಡಿರುವುದು. **ಬೀಗು** – ದೊಡ್ಡದಾಗು, ಉಬ್ಬು, ಹಿಗ್ಗು.

## ಅಭ್ಯಾಸ

**I. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ಪ್ರಾಣಿಗಳನ್ನು ಸುಲಭವಾಗಿ ಕೊಲ್ಲಲು ಬೇಡನ ಉಪಾಯವೇನಾಗಿತ್ತು?

೨. ಜಿಂಕೆಯು ಬೇಡನ ಬಾಣದ ಹೊಡೆತದಿಂದ ತಪ್ಪಿಸಿಕೊಂಡದ್ದು ಹೇಗೆ?

**ಎಲ್ಲರಲ್ಲೂ, ಎಲ್ಲವುದರಲ್ಲೂ ದೋಷವನ್ನು ಕಾಣುವವನು ನೆಮ್ಮದಿಯಿಂದಿರಲಾರ**

೩. ವಿಷದ ಬಾಣವು ಮರಕ್ಕೆ ತಗುಲಿದ್ದರಿಂದಾದ ಪರಿಣಾಮವೇನು?

೫. ಗಿಳಿಯ ತತ್ತ್ವನಿಷ್ಠೆ ಯಾವುದಾಗಿತ್ತು?

೬. ಇಂದ್ರನಿಗೆ ಆಶ್ಚರ್ಯವಾದದ್ದು ಏಕೆ?

೭. ಗಿಳಿಯ ಯಾವ ಗುಣವನ್ನು ಇಂದ್ರನು ಮೆಚ್ಚಿಕೊಂಡನು?

೮. ತನಗಾದ ಸಂತೋಷವನ್ನು ಇಂದ್ರನು ಯಾವ ರೀತಿಯಲ್ಲಿ ಪ್ರಕಟಿಸಿದನು?

**II. ಈ ಪ್ರಶ್ನೆಗಳಿಗೆ ೩–೪ ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಮರವನ್ನು ಬಿಟ್ಟುಹೋಗದೆ ಇರಲು ಗಿಳಿಯು ನೀಡಿದ ಸಮರ್ಥನೆ ಏನಾಗಿತ್ತು?

೨. ಸಾಮಾನ್ಯವಾದ ಲೋಕವರ್ತನೆ ಯಾವುದು?

೩. ಗಿಳಿಯು ಕೇಳಿದ ವರ ಯಾವುದು?

**III. ಸಂದರ್ಭದೊಂದಿಗೆ ವಿವರಿಸಿ.**

೧. "ಇಂಥಾ ಒಣಮರದಲ್ಲಿ ಏಕೆ ವಾಸ ಮಾಡುತ್ತಿದ್ದೀ?"

೨. "ಮನುಷ್ಯನ ಬದುಕಿಗೆ ಈ ಸೂತ್ರ ಮಾದರಿಯಾಗಬಲ್ಲದು."

೩. "ಏನಾದರೂ ವರವನ್ನು ಕೇಳು ಕೊಡುತ್ತೇನೆ."

೪. "ಅದರ ಈಗಿನ ಅವಸ್ಥೆಯನ್ನು ನಾನು ನೋಡಲಾರೆ."



**IV. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ಗಿಳಿಯು ಪರಹಿತಾಕಾಂಕ್ಷಿ ಎನಿಸಿಕೊಂಡದ್ದು ಹೇಗೆ? ವಿವರಿಸಿ.

೨. ಗಿಳಿಯ ವರ್ತನೆಯಿಂದ ಮಾನವನು ಕಲಿಯಬೇಕಾದ ಗುಣಗಳೇನು?

**V. ಮೊದಲೆರಡು ಪದಗಳಿಗಿರುವ ಸಂಬಂಧದಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ಪದ ಬರೆಯಿರಿ.**

೧. ಆಶ್ರಯ : ಆಸರೆ; ವರ್ಣ : ____________

೨. ಉಪಕಾರ ಸ್ಮರಣೆ : ಉಪಕಾರದ ಸ್ಮರಣೆ; ಪುಷ್ಪ ಸಮೃದ್ಧಿ : ____________

**ದ್ವೇಷಸಾಧಿಸುವವನು ಮನುಷ್ಯನೇ ಅಲ್ಲ–ಪ್ಲೇಟೊ**

೩. ಪರಹಿತಾಕಾಂಕ್ಷಿ : ಸವರ್ಣ ದೀರ್ಘಸಂಧಿ; ಗುರಿಯಾಗು : ____________

೪. ಜಿಂಕೆ : ರೂಢನಾಮ; ಇಂದ್ರ : ____________

೫. ಕೃತಜ್ಞತೆ : ಉಪಕಾರ ಸ್ಮರಣೆ ಇರುವುದು; ಕೃತಘ್ನತೆ : ____

## ಭಾಷಾಭ್ಯಾಸ

೧) ಅಕ್ಷರಗಳು ಸೇರಿ ಪದವಾಗುವಂತೆ ಪದಕ್ಕೆ ಇನ್ನೊಂದು ಪದವು ಸೇರಿಯೂ ಪದವಾಗುವುದುಂಟು. ಅಕ್ಷರಗಳು ಸೇರುವುದನ್ನು ಸಂಧಿ ಎನ್ನುತ್ತಾರೆ. ಸಂಧಿ ಆಗುವುದರಿಂದ ಉಚ್ಚರಿಸಲು ಕಷ್ಟವಾಗುವುದಾದರೆ, ಕೇಳಲು ಹಿತವೆನಿಸದಿದ್ದರೆ, ಅಪಾರ್ಥ ಒದಗುವುದಾದರೆ ಅಲ್ಲಿ ಈ ಸೇರುವಿಕೆ ಆಗದು. ಸಂಧಿಯಾಗುವಾಗ ಅಕ್ಷರಗಳ ಲೋಪ, ಆಗಮ, ಆದೇಶವಾಗುವ ಕ್ರಿಯೆ ನಡೆಯುತ್ತದೆ. ಈ ಸಂಧಿಕಾರ್ಯದ ಆಧಾರದ ಮೇಲೆ ಅದೇ ಹೆಸರಿನಿಂದ ಆಯಾ ಸಂಧಿಗೆ ಹೆಸರಾಗುತ್ತದೆ. ಇವು ಕನ್ನಡದ ಸಂಧಿಗಳು. ಈಗ ಈ ಕೆಳಗಿನ ಪದಗಳನ್ನು ಬಿಡಿಸಿಬರೆದು ಅಲ್ಲಾಗುವ ಬದಲಾವಣೆಗಳನ್ನು ಗಮನಿಸಿ ಗೆಳೆಯರೊಂದಿಗೆ ಚರ್ಚಿಸಿ.

ಬೇಟೆಯಾಡು, ಆಶ್ಚರ್ಯವಾಯಿತು, ಸಿದ್ಧನಾಗಿದ್ದ, ಹೊಸಗನ್ನಡ

೨) ದೈಹಿಕವಾಗಿ ನಾವು ಬೆಳೆಯುತ್ತಿರುತ್ತೇವೆ; ಜೊತೆಯಲ್ಲಿ ನಮ್ಮ ಜ್ಞಾನವೂ ಹೆಚ್ಚುತ್ತಿರುತ್ತದೆ. ಇದೇ ಕಾಲದಲ್ಲಿ ನಮ್ಮ ಭಾಷಾಪ್ರೌಢಿಮೆಯೂ ಪುಷ್ಟಿಗೊಳ್ಳಬೇಕು. ಇದಾದದ್ದು ತಿಳಿಯುವುದು, ನಮ್ಮ ಮಾತು–ಬರೆಹಗಳಲ್ಲಿ ಹೊಸಪದಗಳು, ನುಡಿಗಟ್ಟುಗಳು, ಪಡೆನುಡಿಗಳು ಸೇರಿಕೊಂಡಾಗ. ಆದುದರಿಂದ ಯಾವುದೇ ವಿಶೇಷ ಅರ್ಥದ ಪದಗಳ ಪರಿಚಯವಾದಾಗ ಅವುಗಳ ಅರ್ಥವಿಶೇಷವನ್ನು ಮನನಮಾಡಿಕೊಂಡು ಅವಕಾಶ ಸಿಕ್ಕಾಗ ಅವುಗಳನ್ನು ಉಪಯೋಗಿಸುವ ದೃಢಸಂಕಲ್ಪ ಮಾಡಬೇಕು. ಆಗ ನಮ್ಮ ಕಲಿಕೆ ಸಾರ್ಥಕವಾದಂತೆ.

**ನಿಮ್ಮ ಅನುಭವವನ್ನು ಬಳಸಿಕೊಂಡು ಕೆಳಗಿನ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಸೇರಿಸಿ ಹೇಳಲು ಪ್ರಯತ್ನಿಸಿ.**

ಲೋಕವರ್ತನೆ, ಉಪಕಾರಸ್ಮರಣೆ, ಪುಷ್ಪಸಮೃದ್ಧಿ, ಮನಸ್ಸಿಗೆ ಮುದನೀಡು, ಮಾದರಿಯಾಗಬಲ್ಲುದು.

೩) ಕನ್ನಡ ಶಬ್ದಭಂಡಾರದಲ್ಲಿ ಸಹಜವಾಗಿರುವ ನಿಷೇಧಾರ್ಥಕ ಪದಗಳಿವೆ. ಸಂಸ್ಕೃತದಲ್ಲಿಯೂ ಅಂತಹ ಪದಗಳಿವೆ. ಅಂತೆಯೇ ನಿಷೇಧಾರ್ಥಕ ಪೂರ್ವಪ್ರತ್ಯಯಗಳನ್ನು (ಪ್ರಿಫಿಕ್ಸ್) ಸೇರಿಸಿ ಮಾಡಿಕೊಂಡ ಪದಗಳೂ ಇವೆ. ಸಂಸ್ಕೃತ ಪದಗಳಿಗೆ ಸಂಸ್ಕೃತ ಪದಗಳೂ, ಕನ್ನಡಕ್ಕೆ ಕನ್ನಡದವುಗಳೂ ನಿಷೇಧಾರ್ಥಕ ಪದಗಳಾಗಬೇಕು. ಉದಾಹರಣೆಗೆ ಹಗಲಿಗೆ ರಾತ್ರಿ ಎಂಬುದು ಅರ್ಥದಲ್ಲಿ ವಿರೋಧಪದವಾದರೂ ಅದು ಸಮಂಜಸವಾದದ್ದಲ್ಲ. ಹಗಲಿಗೆ ಇರುಳು ಪದವು ಸೂಕ್ತ.

**ಜೀವನದ ಬೆಂಗಾಡಿನಲ್ಲಿ ಬೀಸುವ ತಂಗಾಳಿ ಎಂದರೆ ಸ್ನೇಹ ಒಂದೇ**

ಹಾಗೆಯೇ ಎಲ್ಲಾ ಸಂಸ್ಕೃತ ಪದಗಳಿಗೆ ನಿಃ, ಅ ಮೊದಲಾದ ಪೂರ್ವಪ್ರತ್ಯಯಗಳನ್ನು ಸೇರಿಸಿ ವಿರೋಧ ಪದ ಮಾಡುವುದೂ ಸರಿಯಲ್ಲ.

**ಇವುಗಳ ವಿರುದ್ಧ ಪದಗಳನ್ನು ಯೋಚಿಸಿ ಬರೆಯಿರಿ.**

ಒಣಗಿದ, ಬೀಗು, ಪರಹಿತ, ಕೃತಘ್ನ, ನಿರಾಶ್ರಯ, ಪರ

೪) ಅಕ್ಷರಗಳ ಬದಲಾವಣೆಯೊಂದಿಗೆ ಅರ್ಥವೂ ಬೇರೆಯಾಗುತ್ತದೆ. ಉಚ್ಚಾರದೋಷದಿಂದ ಆ ಅನರ್ಥ ಸಂಭವಿಸುತ್ತದೆ. ಹೀಗಾಗಿ ಸ್ಪಷ್ಟ ಉಚ್ಚಾರ ಮುಖ್ಯ, ಅದರಿಂದಲೇ ಭಾಷಾಶುದ್ಧಿ ಸಾಧ್ಯವಾಗುತ್ತದೆ.

**ಉಚ್ಚಾರದೋಷದಿಂದ ಅರ್ಥ ವ್ಯತ್ಯಾಸಗೊಳ್ಳುವ ಈ ಪದಗಳನ್ನು ಗಮನಿಸಿ.**

ಹೇಳು–ಏಳು, ಹಾರಿಸು–ಆರಿಸು, ಆಧರಿಸು–ಆದರಿಸು, ನಿಧಾನ–ನಿದಾನ, ವಂದೇಮಾತರಂ–ಒಂದೇ ಮಾತರಂ ಬಾನು–ಭಾನು, ಧನ–ದನ, ಹೇಸು–ಏಸು, ಕೃತಜ್ಞ–ಕೃತಘ್ನ

## ಚಟುವಟಿಕೆ

೧ ಸಜ್ಜನನಲ್ಲಿರಬೇಕಾದ ಮೌಲ್ಯಗಳಾವುವು? ಗೆಳೆಯರೊಂದಿಗೆ ಚರ್ಚಿಸಿ. ಪ್ರತಿಯೊಂದು ಮೌಲ್ಯಕ್ಕೂ ಹೆಸರಾದ ಪುರಾಣದ – ಇತಿಹಾಸದ ವ್ಯಕ್ತಿಗಳನ್ನು ಹೆಸರಿಸಿ. ಹಾಗೆಯೇ ಅಂತಹ ವ್ಯಕ್ತಿಗಳ ಕುರಿತು ಸಂಕ್ಷಿಪ್ತವಾಗಿ ಲೇಖನವನ್ನು ಬರೆದು ಭಿತ್ತಿಪತ್ರಿಕೆ – ಶಾಲಾ ಕೈಬರೆಹದ ಪತ್ರಿಕೆಯಲ್ಲಿ ಪ್ರಕಟಿಸಿ.

೨. ಗಿಳಿಯು ಮಾತನಾಡುವುದಾಗಲೀ, ಇಂದ್ರನು ವರವನ್ನು ನೀಡುವುದಾಗಲೀ ವರ್ತಮಾನದಲ್ಲಿ ಆಗದಮಾತು, ಆದರೆ ಈ ಕತೆಯಲ್ಲಿ ಅದು ನಡೆದಿದೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು? ಗೆಳೆಯರೊಂದಿಗೆ, ಬಲ್ಲವರೊಂದಿಗೆ ಮುಕ್ತವಾಗಿ ಚರ್ಚಿಸಿ ಅದನ್ನು ಸಂಗ್ರಹಿಸಿ ಪುಟ್ಟ ಲೇಖನವನ್ನು ಬರೆದು ಭಿತ್ತಿಪತ್ರಿಕೆಯಲ್ಲಿ ಪ್ರಕಟಿಸಿ.

೩. ವೃಕ್ಷಸಂಹಾರ ಹಾಗೂ ವೃದ್ಧರ ಅನಾದರ ಈ ಎರಡನ್ನೂ ಸಮನ್ವಯಗೊಳಿಸಿ ಒಂದು ಪ್ರಬಂಧವನ್ನು ಬರೆಯಿರಿ.



## ಪತ್ರರಚನೆ

ದೂರವಾಣಿಯ ಸೌಲಭ್ಯ, ಮಿಂಚಂಚೆ, ಗಣಕಯಂತ್ರದ ಮೂಲಕ ಬರೆದು ನಡೆಸುವ ಸಂಭಾಷಣೆ ಇತ್ಯಾದಿಗಳಿಂದ ಇಂದು ಎಲ್ಲಾಬಗೆಯ ವ್ಯವಹಾರ ಸುಲಭಸಾಧ್ಯವಾಗಿದೆ. ಇದರಿಂದಾಗಿ ಪತ್ರಸಂಸ್ಕೃತಿ ಎಂಬುದು ದೂರವಾಗಿದೆ. ಹಾಗಾಗಿ ಕೈಬರೆಹದ ಪತ್ರವು ನೀಡುವ ಆತ್ಮೀಯತೆ, ಆಪ್ತತೆ, ವೈಯಕ್ತಿಕತೆ ಮತ್ತು ಭಾವಸಂಬಂಧಿ ಸಂವೇದನೆ ಮಾಯವಾಗಿದೆ. ಅದರಿಂದಾಗಿ ಒಂದು ಸರಳ ದಾಖಲೆಯಾಗುವ ಸಾಕ್ಷಿಯನ್ನು ಕಡೆಗಣಿಸುತ್ತಿದ್ದೇವೆ.

**ಒಳ್ಳೆಯ ಮಾತನ್ನು ಯಾರೇ ಆಡಲಿ, ಅದಕ್ಕೆ ಮನ್ನಣೆ ನೀಡು – ಗಯಟೆ**

ಪತ್ರರಚನೆಯಲ್ಲೂ ಒಂದು ಸೊಗಸಿದೆ, ಅಭಿರುಚಿಯ ಅನಾವರಣ ಇದೆ, ಶಿಸ್ತು ಇದೆ, ಕಾವ್ಯ ನೀಡುವ ಆನಂದ ಇದೆ; ನಮ್ಮ ಸೃಜನಶೀಲತೆಗೆ ಅವಕಾಶ ಇದೆ. ಇಂದು ಪತ್ರದ ಮೂಲಕವೇ ಹೇಳಬೇಕೆಂಬ ಅಗತ್ಯ ಏನೂ ಇಲ್ಲ, ನಿಜ. ಈ ಬದಲಾವಣೆಯನ್ನು ಒಪ್ಪಿಕೊಳ್ಳೋಣ. ಆದರೆ ಪತ್ರರಚನೆಯೇ ಬೇಡ ಎನ್ನುವ ಹಾಗಿಲ್ಲ. ಅರ್ಜಿ, ಬೇಡಿಕೆ, ಮನವಿ, ಮಾಹಿತಿವರ್ಗಾವಣೆ ಇತ್ಯಾದಿಗಳು ಕಂಪ್ಯೂಟರ್‌ನಲ್ಲಾದರೂ ಸಿದ್ಧಗೊಂಡು ಸಾಮಾನ್ಯ ಅಂಚೆ, ಮಿಂಚಂಚೆ, ಫ್ಯಾಕ್ಸ್‌ಗಳ ಮೂಲಕ ರವಾನೆಯಾಗುತ್ತಿದೆ. ಅಂದರೆ ಕೈಯಲ್ಲಿ ಬರೆಯಬೇಕಿಲ್ಲ ಅಷ್ಟೆ.

ನಮ್ಮ ರಾಜ್ಯದ ಆಡಳಿತ ಭಾಷೆ ಕನ್ನಡ. ಹೀಗಾಗಿ ಸರಕಾರಿ ಪತ್ರಗಳು, ಮನವಿಗಳು ಕನ್ನಡದಲ್ಲೇ ಇರಬೇಕಾಗುತ್ತದೆ. ಜನಸಾಮಾನ್ಯರ ವ್ಯವಹಾರಗಳು ಹೆಚ್ಚಾಗಿ ಕನ್ನಡದಲ್ಲೇ ಇರುವುದರಿಂದ ಕನ್ನಡದಲ್ಲಿ ಪತ್ರರಚಿಸುವ ಸಾಮಾನ್ಯ ಜ್ಞಾನವು ನಮಗೆ ಇರಲೇಬೇಕಾಗುತ್ತದೆ.

ಕಳೆದ ತರಗತಿಗಳಲ್ಲಿ ನೀವು ಪತ್ರರಚನೆಯ ಸ್ವರೂಪ ಮತ್ತು ಅದರ ವಿವಿಧ ಹಂತಗಳನ್ನು ತಿಳಿದಿದ್ದೀರಿ. ಬಂಧುಗಳಿಗೆ, ಸ್ನೇಹಿತರಿಗೆ ಬರೆಯುವ ಪತ್ರದಲ್ಲಿ ಆತ್ಮೀಯತೆ ಇರುತ್ತದೆ. ಅದು ಮನಮುಟ್ಟುವಂತೆ ಇರುತ್ತದೆ. ಅಂತಹ ಪತ್ರಗಳನ್ನು ರಚಿಸುವ ಕ್ರಮವನ್ನೂ ಅರಿತಿದ್ದೀರಿ.

ಮನವಿ ಪತ್ರಗಳಲ್ಲಾದರೆ ಸೌಜನ್ಯದೊಂದಿಗೆ ನಿಖರವಾದ ಮಾಹಿತಿ, ನೇರ ನಿರೂಪಣೆ, ವಸ್ತುನಿಷ್ಠತೆ ಇರುತ್ತದೆ. ತನಗೂ, ಸಾರ್ವಜನಿಕರಿಗೂ ಉಪಯೋಗವಾಗುವಂತಹ ಎಲ್ಲಾ ರೀತಿಯ ಪತ್ರಗಳು ಈ ವರ್ಗಕ್ಕೆ ಬರುತ್ತವೆ.

ಎಲ್ಲಾ ಪತ್ರನಮೂನೆಯಲ್ಲಿರುವಂತೆ ಇದರಲ್ಲೂ, ಪತ್ರಶೀರ್ಷಿಕೆಯಾಗಿ ಪತ್ರವನ್ನು ಬರೆಯುವವರ ಹೆಸರು, ವಿಳಾಸ, ಅದರ ಕೆಳಗಡೆ ಪತ್ರಬರೆವ ದಿನಾಂಕ, ಬಳಿಕ ಬದಿಗೆರೆಯ ಪಕ್ಕದಲ್ಲಿ ಪತ್ರವನ್ನು ಯಾರಿಗೆ ಬರೆಯುತ್ತೇವೆಯೋ ಅವರ ಪದನಾಮ (ವ್ಯಕ್ತಿಯ ಹೆಸರಲ್ಲ)–ವಿಳಾಸ, ಅದರ ಕೆಳಗಡೆ ಗೌರವ ಸಂಬೋಧನೆ ಇರುತ್ತದೆ. ತರುವಾಯ ವಿಷಯ: ಎಂಬ ಶೀರ್ಷಿಕೆಯ ಮುಂದೆ ಪತ್ರದ ಮುಖ್ಯ ವಿಷಯ ಒಂದೆರಡು ಸಾಲಲ್ಲಿ ಬರೆದಾದಬಳಿಕ ಮುಂದಿನ ವಾಕ್ಯವೃಂದವಾದ ಪತ್ರದ ಒಡಲಲ್ಲಿ ಎಲ್ಲ ವಿವರಗಳು ಬರುತ್ತವೆ. ಆ ಬಳಿಕ ಮುಕ್ತಾಯದ ವಾಕ್ಯ, ಸಹಿ, ಪತ್ರದೊಂದಿಗೆ ಇತರ ಮಾಹಿತಿಗಳನ್ನು ಇರಿಸುವುದಾದರೆ ಆ ಕುರಿತಾದ ಅಡಕ ಎಂಬ ಭಾಗ. ಇದು ಪತ್ರದ ಸಾಮಾನ್ಯ ಚೌಕಟ್ಟು.

**ಹುಟ್ಟು ನಿನ್ನ ಕೈಯಲ್ಲಿಲ್ಲ ಆದರೆ ಬದುಕು ನಿನ್ನ ಕೈಯಲ್ಲೇ ಇದೆ – ಸಾಕ್ರೆಟಿಸ್**

## ಮಾದರಿ ಪತ್ರ

**ಇವರಿಂದ**

ವಿಕಾಸ, ಕೆಳಹಿತ್ತಿಲು,

ಸ.ಹಿ.ಪ್ರಾ. ಶಾಲೆಯಬಳಿ,

ಚಿಕ್ಕಹಳ್ಳಿ. ಅಂಚೆ : ಬಿದರೂರು.

**ಇವರಿಗೆ**

ಅಧ್ಯಕ್ಷರು, ದಿನಾಂಕ ೧೦-೦೧-೧೧

ಬಿದರೂರು ಗ್ರಾಮ ಪಂಚಾಯಿತಿ

**ಮಾನ್ಯರೇ,**

**ವಿಷಯ:** ಚಿಕ್ಕಹಳ್ಳಿ ಹಾದಿಗೆ ಬೀದಿದೀಪಗಳ ಅಳವಡಿಕೆ.

ನಮ್ಮ ಪಂಚಾಯತು ವ್ಯಾಪ್ತಿಯ ಸರಕಾರಿ ಪ್ರಾಥಮಿಕ ಶಾಲೆಯ ಬಳಿಯಿಂದ ಚಿಕ್ಕಹಳ್ಳಿಗೆ ಹೋಗುವ ಮಾರ್ಗ ತುಂಬಾ ಕೆಟ್ಟದಾಗಿದೆ. ಅಲ್ಲೆಲ್ಲ ವಿಷಜಂತುಗಳ ಓಡಾಟವೂ ಸಾಮಾನ್ಯ. ದಾರಿದೀಪಗಳೇ ಇಲ್ಲದ ಆ ಹಾದಿಯಲ್ಲಿ ರಾತ್ರಿಸಂಚಾರವು ಬಹಳ ಅಪಾಯಕಾರಿಯಾದುದು. ಚಿಕ್ಕಹಳ್ಳಿಯಲ್ಲಿ ಮೂವತ್ತಮೂರು ಮನೆಗಳಿದ್ದು ಅಲ್ಲಿಯ ಸುಮಾರು ಐವತ್ತು ಅರವತ್ತು ಜನರು ನಿತ್ಯವೂ ಬೇರೆಕಡೆಯಲ್ಲಿಯ ತಮ್ಮ ಕೆಲಸ ಮುಗಿಸಿ ಮನೆ ಸೇರುವಾಗ ಕತ್ತಲಾಗಿರುತ್ತದೆ.

ಮೇಲಿನ ಕಾರಣಗಳಿಂದಾಗಿ, ಜನಪರ ಆಡಳಿತ ನೀಡುತ್ತಿರುವ ತಾವು ದಯಮಾಡಿ ಈ ದಾರಿಗೆ ಕನಿಷ್ಠ ಎರಡಾದರೂ ಬೀದಿದೀಪಗಳನ್ನು ಅಳವಡಿಸಿ, ನಮ್ಮೂರ ಜನರ ರಾತ್ರಿಸಂಚಾರದ ಕಷ್ಟವನ್ನು ಕಳೆಯಬೇಕೆಂದು ಅವರೆಲ್ಲರ ಪರವಾಗಿ ವಿನಂತಿ ಮಾಡುತ್ತಿದ್ದೇನೆ.

ವಂದನೆಗಳೊಂದಿಗೆ

**ತಮ್ಮ ವಿಶ್ವಾಸದ**

**(ಸಹಿ)**

**ಅಡಕ** : ಚಿಕ್ಕಹಳ್ಳಿಯ ನಲವತ್ತು ಜನರ ಸಹಿಯಿರುವ ಕಾಗದ.



**ಅವಕಾಶ ಯಾವಾಗಲೂ ಸಿಗುವುದಿಲ್ಲ, ಸಿಕ್ಕಾಗ ಸರಿಯಾಗಿ ಉಪಯೋಗಿಸಿಕೊ – ರಾಬರ್ಟ್ ಬರ್ನ್ಸ್**

# ಗದ್ಯ – ೨

# ರಾಹುಲ್ ದ್ರಾವಿಡ್

*–ಸಂಪಾದಿತ*

**ಪಾಠ ಪ್ರವೇಶ:** ಸಾಧನೆಯ ಕ್ಷೇತ್ರ ಇಂತಹುದೆ ಆಗಿರಬೇಕು ಎಂದೇನೂ ಇಲ್ಲ. ಶಿಲ್ಪ, ಚಿತ್ರ, ಸಂಗೀತ, ನೃತ್ಯ, ಪುರಾತನವಸ್ತು ಹಾಗೂ ಅಂಚೆ ಚೀಟಿಗಳ ಸಂಗ್ರಹ ಹೀಗೆ ಅದು ಯಾವುದೇ ಆಗಿರಲಿ, ಅದರಲ್ಲಿ ಖ್ಯಾತಿಯನ್ನು ಗಳಿಸಲು ಸಾಧ್ಯ. ಪ್ರಾಣಿಸಂಕುಲದ ನಡುವೆ ಮಾನವನನ್ನು ಪ್ರತ್ಯೇಕಿಸುವ ಇಂತಹ ಹಲವಾರು ಕಲೆಗಳನ್ನು ಭಾರತೀಯರು ಗುರುತಿಸಿದ್ದರು. ಅವುಗಳಲ್ಲಿ ಕ್ರೀಡೆಯೂ ಒಂದು. ಅದರಲ್ಲೂ ನೂರಾರು ವಿಧಗಳಿವೆ. ತಾನು ಆಯ್ಕೆಮಾಡಿಕೊಂಡ ಕಲೆಯಲ್ಲಿ 'ಸೈ' ಎನಿಸಿಕೊಳ್ಳಲು ಏಕಾಗ್ರತೆ, ಚುರುಕುತನ, ತತ್‌ಕ್ಷಣದಲ್ಲಿ ಪ್ರತಿಕ್ರಿಯಿಸುವಿಕೆ, ಅರ್ಪಣಾಮನೋಭಾವ ಇತ್ಯಾದಿಗಳ ಪೂರ್ಣ ಅರಿವು ಇರಬೇಕು. ಕುಸ್ತಿ ಪಂದ್ಯಾಟಕ್ಕೆ ಬಲವೊಂದೇ ಸಾಕಾಗದು. ಹಾಗೆಯೆ ಶೈಕ್ಷಣಿಕ ಸಾಧನೆಯಂತೆಯೇ ಅನ್ಯಕ್ಷೇತ್ರದಲ್ಲಿಯ ಸಾಧನೆಯಿಂದಲೂ ಅಂತರಾಷ್ಟ್ರೀಯ ಗೌರವ ಪಡೆಯಲು ಸಾಧ್ಯ. ಕಲೆಯು ಎಲ್ಲರನ್ನೂ ಕೈಬೀಸಿ ಕರೆಯುತ್ತದೆ; ಆದರೆ ಆಯ್ಕೆ ಮಾಡಿಕೊಳ್ಳುವುದು ಸತತ ಪರಿಶ್ರಮಿಗಳನ್ನು ಮಾತ್ರ. ಅಂತಹವರು ತಾವಾಗಬೇಕಾದರೆ ನಿರಂತರ ಸಾಧನೆ ಅವರದಾಗಿರಬೇಕು. ಅಂತಹ ಕ್ರೀಡಾ ಸಾಧಕರಿಗೆ ನಾನಾ ರಂಗದಲ್ಲಿ ಉದ್ಯೋಗವೂ ಸುಲಭವಾಗಿಯೇ ಸಿಗುತ್ತದೆ.

ಅಮೇರಿಕಕ್ಕೆ ಬೇಸ್‌ಬಾಲ್, ಇಂಗ್ಲೇಂಡಿಗೆ ಫುಟ್‌ಬಾಲ್, ಭಾರತಕ್ಕೆ ಹಾಕಿ, ಆಸ್ಟ್ರೇಲಿಯಾ ಮತ್ತು ನ್ಯೂಜಿಲ್ಯಾಂಡಿಗೆ ರಗ್ಬಿ – ಹೀಗೆ ಪ್ರತಿಯೊಂದು ದೇಶಕ್ಕೂ ಅದರದ್ದೇ ಆದ ಕ್ರೀಡೆ ಎಂಬುದೊಂದಿದೆ. ಹೀಗಿದ್ದರೂ ಅನೇಕ ದೇಶಗಳಲ್ಲಿ ಅವರವರ ರಾಷ್ಟ್ರೀಯ ಕ್ರೀಡೆಗಳನ್ನು ಬದಿಗೆಸರಿಸಿ ಕ್ರಿಕೆಟ್ ಎಂಬುದು ಜನಪ್ರಿಯ ಆಟವಾಗಿ ಮೆರೆಯುತ್ತಿದೆ. ಟೆಸ್ಟ್ ಆಡುವ ಸಾಮರ್ಥ್ಯವುಳ್ಳ ಆಟಗಾರರನ್ನು ಹೊಂದಿರುವ ಹತ್ತು ರಾಷ್ಟ್ರಗಳನ್ನು ಐದು ದಿನಗಳ ಪಂದ್ಯಾಟಕ್ಕಾಗಿ ಅಂತಾರಾಷ್ಟ್ರೀಯ ಕ್ರಿಕೆಟ್ ಸಂಸ್ಥೆಯು ಮಾನ್ಯಮಾಡಿದೆ. ಇವುಗಳೊಂದಿಗೆ ಇನ್ನೂ ಆರು ದೇಶಗಳನ್ನು ಒಂದು ದಿನದ ಕ್ರಿಕೆಟಿಗಾಗಿ ಆಯ್ಕೆಮಾಡಿದೆ. ಇಷ್ಟಲ್ಲದೆ ಇನ್ನೂ ನೂರಾರು ರಾಷ್ಟ್ರಗಳು ಕ್ರಿಕೆಟನ್ನು ಆಡುತ್ತವೆ ಎಂದರೆ ಈ ಆಟದಹುಚ್ಚು ಎಂತಹುದು ಎಂದು ಅರ್ಥಮಾಡಿಕೊಳ್ಳಬಹುದು. ಹೀಗಿದ್ದರೂ ಈ ಆಟಕ್ಕೊಂದು ಅಪವಾದವು ಇದೆ. 'ಐದು ದಿನಗಳ ಕಾಲ ಆಟವನ್ನು ನೋಡುವುದೆಂದರೆ ಅಷ್ಟು ಮಾನವ ಶ್ರಮ ವ್ಯರ್ಥವಾದಂತೆ; ಇಂತಹ ಲಕ್ಷಾಂತರ ಮಂದಿಗಳಿಂದ ದೇಶದ ಪ್ರಗತಿಗೆ ಅಷ್ಟು ಹಿನ್ನಡೆಯಾಗುತ್ತದೆ' ಎಂಬುದೇ ಆ ಟೀಕೆಯ ಹಿಂದಿರುವ ಕಾರಣ.

ಇಂತಹ ದೂರನ್ನು ದೂರಮಾಡಲು ಮತ್ತು ಈ ಆಟದಲ್ಲಿ ಇನ್ನಷ್ಟು ಆಸಕ್ತಿ ಮೂಡಿಸಲು ಒಂದು ದಿನದ ಕ್ರಿಕೆಟ್ ಬಂತು. ಇದರ ರೋಚಕತೆಯನ್ನು ಮತ್ತಷ್ಟು ರೋಮಾಂಚನಗೊಳಿಸಲು ಇಪ್ಪತ್ತು ಓವರ್‌ಗಳ ಆಟವೂ ಬಂದಿತು.

ಈ ಮೂರೂ ವಿಧಗಳಲ್ಲಿ ಭಾರತವು ಇತ್ತೀಚಿನ ದಿನಗಳಲ್ಲಿ ಉತ್ತಮ ಸಾಧನೆಯನ್ನು ಮಾಡುತ್ತಿದೆ. ಆದರೆ ಕ್ಷಮತೆಯು ಯಾವಾಗಲೂ ಸ್ಥಿರವಲ್ಲ. ಅದು ಹಾವು–ಏಣಿ ಆಟದಂತೆ. ಒಂದಷ್ಟು ಕಾಲ ಮೇಲು

**ಎಲ್ಲರ ಸಾರ್ಥಕ ಜೀವನಮಟ್ಟವು, ಅವರ ಸಾಧನೆಯ ಮಟ್ಟವನ್ನು ಅವಲಂಬಿಸಿದೆ – ವಿಲಿಯಂ ಶೇಕ್ಸ್‌ಪಿಯರ್.**

ಮೇಲಕ್ಕೆ; ಮತ್ತೊಂದು ದಿನ ಕೆಳಕ್ಕೆ. ಹತ್ತೊಂಬತ್ತು ವರ್ಷದೊಳಗಿನ ಭಾರತದ ಯುವ ಕ್ರಿಕೆಟ್‌ತಂಡವೂ ವಿಶ್ವಕ್ರಿಕೆಟಿನ ಪಟ್ಟವನ್ನು ಅಲಂಕರಿಸಿತ್ತು. ಮಹಿಳೆಯರೂ ಈ ಕ್ಷೇತ್ರದಲ್ಲಿ ಸಾಕಷ್ಟು ಸಾಧನೆಗೈದಿದ್ದಾರೆ.

ಭಾರತೀಯ ಕ್ರಿಕೆಟಿನ ಈ ಯಶಸ್ಸಿನ ಹಿಂದೆ ನೂರಾರು ಖ್ಯಾತನಾಮರಿದ್ದಾರೆ. ವಿನೂ ಮಂಕಡ್, ಕಪಿಲ್‌ದೇವ್, ಪಟೌಡಿ, ಇಂಜಿನಿಯರ್, ಸುನಿಲ್‌ಗವಾಸ್ಕರ್, ತೆಂಡುಲ್ಕರ್, ಧೋನಿ.... ಹೀಗೆ ಹೇಳಹೊರಟರೆ – ಅನೇಕ ಸಾಧಕರ ಚಿತ್ರಗಳು ಕಣ್ಣಮುಂದೆ ಸುಳಿದಾಡುತ್ತವೆ. ಇವರಲ್ಲಿ ಕರ್ನಾಟಕದವರ ಕೊಡುಗೆಯೂ ಅಸಾಮಾನ್ಯವೇ. ವಿಶಿಷ್ಟ ಸಾಧನೆಯ ಸರದಾರರು ಅವರಾಗಿದ್ದಾರೆ. ಬಿ.ಎಸ್.ಚಂದ್ರಶೇಖರ ಎಂದಾಕ್ಷಣ ಅವರ ಎಸೆತದ ವೇಗ ಮತ್ತು ಗೂಗ್ಲಿಯ ನೆನಪಾಗುತ್ತದೆ. ಲೇಟ್‌ಕಟ್, ಸ್ಕ್ವೇರ್‌ಕಟ್‌ಗೆ ಜಿ.ಆರ್.ವಿಶ್ವನಾಥರು ಹೆಸರುಪಡೆದವರು. ಒಂದು ಇನ್ನಿಂಗ್ಸ್‌ನ ಎಲ್ಲಾ ಹತ್ತು ಹುದ್ದರಿಗಳನ್ನು ಪಡೆದ ವಿಶ್ವದ ದ್ವಿತೀಯ ಎಸೆತಗಾರರು ಅನಿಲ್ ಕುಂಬ್ಳೆಯವರು. (ಜಿಮ್‌ಲೇಕರ್ ಮೊದಲಿಗರು) ಕಲಾತ್ಮಕ ಆಟಗಾರರೆಂದು ಖ್ಯಾತರಾಗಿರುವ ದ್ರಾವಿಡರನ್ನು 'ಗೋಡೆ' ಎಂದೇ ಗುರುತಿಸುವುದುಂಟು. ಅಂತಹ ರಕ್ಷಣಾತ್ಮಕ ಆಟ ಅವರದ್ದು. ಆದುದರಿಂದಲೇ ಅವರು ಕರ್ನಾಟಕ ತಂಡದ ಅನಿವಾರ್ಯ ಆಟಗಾರರೆಂದೇ ಖ್ಯಾತರಾಗಿದ್ದರು.



ಶರದ್ ದ್ರಾವಿಡ್ ಮತ್ತು ಪುಷ್ಪಾ ದ್ರಾವಿಡರ ಪುತ್ರ ರಾಹುಲ್ ದ್ರಾವಿಡ್ ಹುಟ್ಟಿದ್ದು ಮಧ್ಯಪ್ರದೇಶದ ಇಂದೋರ್‌ನಲ್ಲಿ. ಹಾಗಿದ್ದೂ ಅವರ ನಂಟು ಪೂರ್ಣವಾಗಿ ಕರ್ನಾಟಕದೊಂದಿಗೇ ಇದೆ. ಅದು ಕನ್ನಡಿಗರಿಗೆ ಹೆಮ್ಮೆಯ ವಿಷಯವೇ ಸರಿ. ಓದಿದ್ದು ಬೆಂಗಳೂರಿನಲ್ಲಿ, ಕ್ರಿಕೆಟನ್ನು ಪ್ರತಿನಿಧಿಸುವುದೂ ಕರ್ನಾಟಕದವರಾಗಿ. ಈ ದ್ರಾವಿಡ್ ಎಂಬ ಕುಲನಾಮ ಅವರಿಗೆ ಬಂದದ್ದು ಅವರ ಮುತ್ತಜ್ಜನಿಂದ. ಅವರು ತಾಂಜಾವೂರಿನಿಂದ ಗ್ವಾಲಿಯರ್‌ಗೆ ವಲಸೆಹೋಗಿ ಅಲ್ಲಿ ಪ್ರಧಾನ ಪುರೋಹಿತರಾಗಿದ್ದರು. ಅಲ್ಲಿ ದಕ್ಷಿಣ ಭಾರತದಿಂದ ಬಂದವರನ್ನು ದ್ರಾವಿಡರೆಂದು ಸಂಬೋಧಿಸುತ್ತಿದ್ದರು. ಇದರಿಂದಾಗಿ ಸಹಜವಾಗಿ ಪುರೋಹಿತರು ದ್ರಾವಿಡರಾದರು. ಅಲ್ಲಿಂದ ಅವರ ಮನೆತನದ ಹೆಸರೂ ದ್ರಾವಿಡ ಎಂದಾಯಿತು.

'ಬೆಳೆಯ ಸಿರಿ ಮೊಳಕೆಯಲ್ಲಿ' ಎಂಬ ಗಾದೆಮಾತು ದ್ರಾವಿಡರಿಗೆ ಸೊಗಸಾಗಿ ಅನ್ವಯವಾಗುತ್ತದೆ. ಶಾಲಾ ಅಭ್ಯಾಸದ ಜೊತೆಯಲ್ಲಿ ಕ್ರಿಕೆಟಿಗೆ ಒಂದಷ್ಟು ಸಮಯ ಮೀಸಲಾಗಿಟ್ಟು ಸತತ ಅಭ್ಯಾಸಗೈದಿದ್ದರು. ಇವರ ಪ್ರತಿಭೆಗೆ ಸರಿಯಾದ ನೀರೆರೆದು, ದಿಕ್ಕು ತೋರಿದವರು ಕೆ.ಕೆ.ತಾರಾಪುರರು. ಅದರ ಫಲವಾಗಿ ತಮ್ಮ ಹನ್ನೆರಡನೆಯ ವಯಸ್ಸಿನಲ್ಲಿಯೇ ಶಾಲಾತಂಡವನ್ನು ಪ್ರತಿನಿಧಿಸುವಂತಾಯಿತು. ಆಡಿದ ಮೊದಲ ಪಂದ್ಯದಲ್ಲೇ ಶತಕದ ಗೌರವ. ಬಳಿಕ ಹದಿನೈದರ ಒಳಗಿನ ವಯೋಮಿತಿಯ ಕರ್ನಾಟಕ ತಂಡದ ಸದಸ್ಯರಾದರು. ಅದು ಅವರ ಸತತ ಪರಿಶ್ರಮಕ್ಕೆ ಸೂಕ್ತ ಸ್ಥಾನಮಾನವಾಗಿತ್ತು. ಸಾಧನೆಯು ಊರ್ಧ್ವಗಾಮಿಯಾಗಿದ್ದುದರಿಂದ ಹದಿನೇಳರೊಳಗಿನ ತಂಡಕ್ಕೂ ಆಯ್ಕೆಗೊಂಡರು. ಸ್ಥಿರವಾದ ಆಟದ ಕ್ಷಮತೆಯಿಂದಾಗಿ ಹತ್ತೊಂಬತ್ತರ ಒಳಗಿನ ತಂಡದಲ್ಲೂ ಸ್ಥಾನಪಡೆದರು. ಈ ಕಾಲದಲ್ಲಿ ಅವರು ವಿಕೆಟ್ ಕೀಪರ್ ಆಗಿ ಕೆಲಸ ನಿರ್ವಹಿಸುತ್ತಿದ್ದರು. ಜಿ.ಆರ್.ವಿಶ್ವನಾಥರಂತಹ ಹಿರಿಯ ಆಟಗಾರರ ಸಲಹೆಯಂತೆ ಕೇವಲ ಬ್ಯಾಟಿಂಗ್‌ಗಷ್ಟೇ ತಮ್ಮ ಸಾಮರ್ಥ್ಯವನ್ನು ತೊಡಗಿಸಿಕೊಂಡರು. ಇದರಿಂದಾಗಿ ಅವರ ಆಟದ ಶೈಲಿಗೆ ಒಂದು ಕಲಾತ್ಮಕತೆ ಒದಗಿಬಂತು. ೧೯೯೬ರಲ್ಲಿ ಇಂಗ್ಲೆಂಡ್ ಪ್ರವಾಸದ ತಂಡಕ್ಕೆ ಆಯ್ಕೆಗೊಳ್ಳಲು ಅವರ ರನ್‌ಗಳಿಕೆಯ ದಾಖಲೆಯೂ ಕಾರಣವಾಗಿತ್ತು. ಆ

**ಕೋಪವು ದಡ್ಡತನದಲ್ಲಿ ಹುಟ್ಟಿ, ಪಶ್ಚಾತ್ತಾಪದಲ್ಲಿ ಕೊನೆಗೊಳ್ಳುತ್ತದೆ – ಪೈಥಾಗೊರಸ್.**

ಸರಣಿಯ ಎರಡನೆಯ ಪಂದ್ಯವು ಅವರ ಚೊಚ್ಚಲ ಟೆಸ್ಟ್. ದ್ರಾವಿಡರು ಅಲ್ಲಿ ೩೬೩ ನಿಮಿಷಗಳ ಕಾಲ ಕ್ರೀಸ್‌ನಲ್ಲಿದ್ದರು. ಎದುರಿಸಿದ ಎಸೆತ ೨೬೭. ಬಾರಿಸಿದ ಬೌಂಡರಿ ಕೇವಲ ಆರು. ಕೇವಲ ಐದು ರನ್ನಿನಿಂದ ಚೊಚ್ಚಲ ಟೆಸ್ಟ್‌ನಲ್ಲಿಯೇ ಶತಕವಂಚಿತರಾದರು. ಅಂದಿನ ಆಟದ ಏಕಾಗ್ರತೆ, ತಾಳ್ಮೆ, ಕ್ರೀಸನ್ನು ಆಕ್ರಮಿಸಿಕೊಳ್ಳುವ ಛಲ ಇವೆಲ್ಲವೂ ಅವರ ಭವಿಷ್ಯಕ್ಕೆ ಮುನ್ನುಡಿಯಾಗಿತ್ತು.

ಮುಂದಿನದೆಲ್ಲಾ ಯಶೋಗಾಥೆಯೇ.

ಆಡಿದ್ದು ೧೬೪ ಟೆಸ್ಟ್. ಗಳಿಸಿದ್ದು ಒಟ್ಟು ೧೩೨೮೮ ರನ್. ಇದರಿಂದ ಟೆಸ್ಟ್ ಇತಿಹಾಸದಲ್ಲಿ ವಿಶ್ವದ ಅತ್ಯಧಿಕ ರನ್‌ಗಳಿಸಿದ ದ್ವಿತೀಯ ಆಟಗಾರರೆಂಬ ಖ್ಯಾತಿಗೆ ಭಾಜನರಾಗುವಂತಾಯಿತು. ಅಂತೆಯೇ ೩೪೪ ಒಂದು ದಿನದ ಪಂದ್ಯಗಳಲ್ಲಿ ಹನ್ನೆರಡು ಶತಕಗಳೊಂದಿಗೆ ಹತ್ತು ಸಾವಿರದ ಎಂಟುನೂರ ತೊಂಬತ್ತು ಓಟಗಳಿಕೆಯ ಸಾಧನೆ ಅವರದ್ದು.

ಒಂದು ಉತ್ತಮವಾದ ಎಸೆತವು ಎಂತಹ ಪ್ರಸಿದ್ಧ ಆಟಗಾರನನ್ನಾದರೂ ಔಟ್ ಮಾಡಬಹುದು. ಆದರೆ ದ್ರಾವಿಡರದ್ದು ಬಹುತೇಕ ಎಲ್ಲಾ ರೀತಿಯ ಎಸೆತಗಳನ್ನು ನಿಭಾಯಿಸುವ, ವಿಕೆಟನ್ನು ಒಪ್ಪಿಸದಿರುವ, ಸಾವಕಾಶವಾಗಿ ರನ್‌ಗಳಿಸುವ ಅದ್ವಿತೀಯ ಬ್ಯಾಟಿಂಗ್ ಶೈಲಿ. ದಿನವಿಡೀ ಕ್ರೀಸಿನಲ್ಲಿ ನಿಲ್ಲಬಲ್ಲ ಸಾಮರ್ಥ್ಯ ಅವರದ್ದು. ಅದೇ ಅವರನ್ನು 'ಗೋಡೆ' ಎಂಬ ಅನ್ವರ್ಥನಾಮದಿಂದ ಪ್ರಸಿದ್ಧರನ್ನಾಗಿಸಿತು. ಅಂದರೆ ಅದರ ಅರ್ಥ ದ್ರಾವಿಡ್ ಎಂದೂ ಔಟ್ ಆಗಿಲ್ಲ ಎಂದಲ್ಲ.

ಟೆಸ್ಟ್ ಪ್ರವೇಶದ ನಾಲ್ಕನೆಯ ವರ್ಷದಲ್ಲಿಯೇ 'ವಿಸ್ಡನ್' ಸಂಸ್ಥೆಯಿಂದ ವರ್ಷದ ಕ್ರಿಕೆಟಿಗನೆಂಬ ಗೌರವಕ್ಕೆ ದ್ರಾವಿಡರು ಪಾತ್ರರಾದರು.

ಎರಡು ಬಾರಿ ಭಾರತೀಯ ತಂಡದ ನಾಯಕರಾಗಿ ಎರಡಲ್ಲೂ ಯಶಸ್ಸನ್ನು ಗಳಿಸಿದ್ದರು. ಮೊದಲಿನದು ೨೦೦೫ರಲ್ಲಿ, ಶ್ರೀಲಂಕಾದ ವಿರುದ್ಧವಾಗಿ. ೨೦೦೭ರಲ್ಲಿ ಇಂಗ್ಲೇಂಡ್ ವಿರುದ್ಧ ಪಡೆದ ಸರಣಿಜಯವು ೨೧ ವರ್ಷಗಳ ಬಳಿಕ ಪಡೆದದ್ದು ಎಂಬುದರಿಂದ ಮಹತ್ವ ಪಡೆದಿತ್ತು.

ಬೌಂಡರಿ ಬಾರಿಸು ಅಥವಾ ಔಟಾಗು ಎಂಬ ಮನೋಭಾವದ ಆಟಗಾರರಿಗಿಂತ ತೀರಾ ಭಿನ್ನವಾದ ಶೈಲಿ ರಾಹುಲರದ್ದು. ಸಂಯಮದ ಹೊಡೆತ, ಉತ್ತಮ ಎಸೆತವನ್ನು ಗೌರವಿಸುವುದು, ಕೆಟ್ಟ ಎಸೆತವನ್ನು ಅಷ್ಟೇ ನಿರ್ದಾಕ್ಷಿಣ್ಯವಾಗಿ ಶಿಕ್ಷಿಸುವುದು, ಎಲ್ಲ ಬಗೆಯ ಹೊಡೆತಗಳಲ್ಲೂ ಶಿಸ್ತು, ಕಲಾತ್ಮಕತೆ. ಆದುದರಿಂದ ಎಲ್ಲವೂ ನಯನ ಮನೋಹರ. ಇವು ದ್ರಾವಿಡರ ಆಟದ ವೈಶಿಷ್ಟ್ಯ.

ಇವರು ಎಂದೂ ಸ್ವಂತ ದಾಖಲೆಗಾಗಿ ಆಡಿದವರಲ್ಲ; ತಂಡಕ್ಕಾಗಿ ಅವರ ತಪಸ್ಸು. ಅವರ ಹಿರಿಯರು ಅವರಿಗೆ ಬೋಧಿಸಿದ್ದು ಅದನ್ನೇ – "ದೇಶ ಮೊದಲು, ದೇಶಕ್ಕಾಗಿ ಆಡು".

ಯಶಸ್ಸಿನ ಶಿಖರದಲ್ಲಿರುವಾಗಲೇ ಕಿರಿಯರಿಗೆ ಅವಕಾಶ ಮಾಡಿಕೊಡಲೆಂದು ೨೦೧೨ರ ಮಾರ್ಚ್‌ನಲ್ಲಿ ಟೆಸ್ಟ್ ಮತ್ತು ಏಕದಿನ ಪಂದ್ಯಗಳಿಗೆ ವಿದಾಯ ಹೇಳಿದರು.

ಒಬ್ಬ ವ್ಯಕ್ತಿ ಅಪೂರ್ವ ಸಾಧಕನೆನ್ನಿಸಿಕೊಳ್ಳಲು ಇನ್ನೇನು ಬೇಕು?

**ವ್ಯಕ್ತಿಯ ಸ್ವಭಾವವನ್ನು ಅವರ ಮಾತು ಹೇಳುತ್ತದೆ – ಅರಿಸ್ಟಾಟಲ್.**

## ಅರ್ಥತಿಳಿಯಿರಿ

**ಏಕಾಗ್ರತೆ** – ಒಂದೇ ಗುರಿಯ ಕಡೆಗೆ ಗಮನ. **ನಿರಂತರ** – ಒಂದೇಸಮನೆ, ಎಡೆಇಲ್ಲದ, ಸತತ. **ಸಮರ್ಥ** – ದಕ್ಷ, ಗಟ್ಟಿಗ. **ಸಾಮರ್ಥ್ಯ** – ಸತ್ವ, ಶಕ್ತಿ. **ಅಪವಾದ** – ನಿಂದೆ, ಅನ್ಯಾಯವಾದ ಆರೋಪ. **ರೋಚಕತೆ** – ಉತ್ತೇಜನಕಾರಿ. **ರೋಮಾಂಚನ** – ಮೈಕೂದಲು ನೆಟ್ಟಗಾಗುವಿಕೆ, ನವಿರೇಳು. **ಖ್ಯಾತನಾಮ** – ಹೆಸರಾಂತ. **ಸಾಧಕ** – ಸಾಧಿಸಿದವ. **ಊರ್ಧ್ವಗಾಮಿ** – ಮೇಲು ಮುಖದ ಚಲನೆ, ಅಭಿವೃದ್ಧಿಯೇ ಗುರಿಯಾಗಿರುವವನು. **ಕ್ಷಮತೆ** – ಯೋಗ್ಯತೆ, ಅರ್ಹತೆ. **ಕಲಾತ್ಮಕತೆ** – ಕೃತಿಯಲ್ಲಿರುವ ಸೊಗಸು. **ಭಾಜನ** – ಅರ್ಹ, ಯೋಗ್ಯ. **ಕರತಲಾಮಲಕ** – (ಕರತಲ + ಆಮಲಕ)ಅಂಗೈಯಲ್ಲಿರುವ ನೆಲ್ಲಿಕಾಯಿ, ಸುಸ್ಪಷ್ಟ. **ನಿಭಾಯಿಸು** – ನಿರ್ವಹಿಸು. **ಸಂಯಮ** – ಹತೋಟಿ, ಇಂದ್ರಿಯನಿಗ್ರಹ. **ವಿದಾಯ** – ಬೀಳ್ಕೊಡುಗೆ.

## ಅಭ್ಯಾಸ

**I. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. ಸಾಧನೆಗೆ ಅವಶ್ಯಕವಾದುದು ಯಾವುದು?

೨. ಕ್ರಿಕೆಟ್ ಆಟದ ಬಗ್ಗೆ ಇರುವ ಅಪವಾದವೇನು?

೩. ರಾಹುಲರ ಹೆಸರಿಗೆ ದ್ರಾವಿಡ್ ಎಂಬುದು ಸೇರಿದ್ದು ಹೇಗೆ?

೪. ರಾಹುಲರು ತನ್ನ ಮೊದಲ ಟೆಸ್ಟ್ ಇನ್ನಿಂಗ್ಸ್‌ನಲ್ಲಿ ಗಳಿಸಿದ ಓಟಗಳು ಎಷ್ಟು?

೫. ಹಾವು – ಏಣಿ ಆಟ ಎಂಬುದರ ಅರ್ಥ ಸ್ವಾರಸ್ಯವೇನು?



**II. ಈ ಪ್ರಶ್ನೆಗಳಿಗೆ ೩–೪ ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಕರ್ನಾಟಕದ ಕ್ರಿಕೆಟ್ ಆಟಗಾರರ ಹಿರಿಮೆ ಎಂತಹುದು?

೨. ಟೆಸ್ಟ್‌ಪೂರ್ವದ ರಾಹುಲರ ಕ್ರಿಕೆಟ್ ಸಾಧನೆ ಹೇಗಿತ್ತು?

೩. ರಾಹುಲ್ ದ್ರಾವಿಡರನ್ನು 'ಗೋಡೆ' ಎಂದು ಕರೆಯಲು ಕಾರಣವೇನು?

೪. ಕ್ರಿಕೆಟ್ ಆಟದ ಬಗ್ಗೆ ನಿನ್ನ ಅಭಿಪ್ರಾಯವೇನು?

೫. ನಿಮ್ಮ ಇಷ್ಟದ ಹವ್ಯಾಸ ಯಾವುದು? ಅದನ್ನು ಆರಿಸಿಕೊಳ್ಳಲು ಕಾರಣವೇನು?

**III. ಸಂದರ್ಭದೊಂದಿಗೆ ವಿವರಿಸಿ.**

೧. 'ಬೆಳೆಯ ಸಿರಿ ಮೊಳಕೆಯಲ್ಲಿ'.

೨. ತಂಡಕ್ಕಾಗಿ ಅವರ ತಪಸ್ಸು.

**ಒಂದು ಹೃದಯವನ್ನು ಅರ್ಥಮಾಡಿಕೊಳ್ಳಲು ಇನ್ನೊಂದು ಹೃದಯದಿಂದ ಮಾತ್ರ ಸಾಧ್ಯ – ಗೌತಮ ಬುದ್ಧ.**

೩. ಅಷ್ಟು ಮಾನವಶ್ರಮ ವ್ಯರ್ಥವಾದಂತೆ.

೪. ಅದರ ಅರ್ಥ ದ್ರಾವಿಡ್ ಎಂದೂ ಔಟ್ ಆಗಿಲ್ಲ ಎಂದಲ್ಲ.

**IV. ಸುಮಾರು ಹತ್ತು ವಾಕ್ಯಗಳಲ್ಲಿ ಈ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

೧. ರಾಹುಲ್ ದ್ರಾವಿಡರು ಇತರ ಆಟಗಾರರಿಗಿಂತ ಭಿನ್ನರೆನಿಸಿದ್ದು ಹೇಗೆ?

೨. 'ದೇಶ ಮೊದಲು' ಈ ಮಾತನ್ನು ನಿನ್ನ ಜೀವನದಲ್ಲಿ ಹೇಗೆ ಅಳವಡಿಸಿಕೊಳ್ಳುವಿ?

**V. ಕೆಳಗಿನ ಅಪೂರ್ಣ ಹೇಳಿಕೆಗಳನ್ನು ಪೂರ್ಣಗೊಳಿಸಲು ನಾಲ್ಕು ಆಯ್ಕೆಗಳನ್ನು ನೀಡಲಾಗಿದೆ. ಅವುಗಳಲ್ಲಿ ಸರಿಯಾದುದನ್ನು ಆರಿಸಿ ಬರೆಯಿರಿ :**

೧. ಭಾರತೀಯ ಆಟವೆಂಬುದು ಇದು –

೧. ಹಾಕಿ　೨. ಫುಟ್‌ಬಾಲ್　೩. ಬೇಸ್‌ಬಾಲ್　೪. ಕ್ರಿಕೆಟ್.

೨. ಕ್ರಿಕೆಟ್ ಹುಟ್ಟಿದ ರಾಷ್ಟ್ರ –

೧. ಭಾರತ　೨. ಇಂಗ್ಲೆಂಡ್　೩. ಆಸ್ಟ್ರೇಲಿಯಾ　೪. ಪಾಕಿಸ್ಥಾನ.

೩. ದ್ರಾವಿಡರ ಹುಟ್ಟೂರು

೧. ಬೆಂಗಳೂರು　೨. ಇಂದೋರ್　೩. ಗ್ವಾಲಿಯರ್　೪. ಮಧ್ಯಪ್ರದೇಶ

೪. ಟೆಸ್ಟ್‌ನ ಒಂದು ಇನ್ನಿಂಗ್ಸ್‌ನ ಎಲ್ಲಾ ೧೦ ವಿಕೆಟ್‌ಗಳನ್ನು ಗಳಿಸಿದ ಮೊದಲಿಗ

೧. ಬಿ.ಎಸ್.ಚಂದ್ರಶೇಖರ　೨. ಶೇನ್‌ವಾರ್ನ್

೩. ಕುಂಬ್ಳೆ　೪. ಜಿಮ್‌ಲೇಕರ್

೫. ದ್ರಾವಿಡರ ಕ್ರಿಕೆಟ್ ಆಸಕ್ತಿಗೆ ನೀರೆರೆದು ಪೋಷಿಸಿದವರು

೧. ಕೆ.ಕೆ.ತಾರಾಪುರ್　೨. ಇ.ಎ.ಎಸ್.ಪ್ರಸನ್ನ

೩. ಜಿ.ಆರ್.ವಿಶ್ವನಾಥ　೪. ರೋಜರ್ ಬಿನ್ನಿ



**VI. ಅ ಪಟ್ಟಿಯಲ್ಲಿರುವ ಪದಗಳಿಗೆ 'ಬಿ' ಪಟ್ಟಿಯಲ್ಲಿರುವ ಪದಗಳಿಂದ ಆರಿಸಿ ಹೊಂದಿಸಿ ಬರೆಯಿರಿ**

| ಅ | | ಬಿ |
|---|---|---|
| ೧. ಅಮೇರಿಕ | – | ಅ) ಬಾಸ್ಕೆಟ್ ಬಾಲ್ |
| ೨. ಬ್ರೆಝಿಲ್ | – | ಆ) ಚೆಸ್ |
| ೩. ಆಸ್ಟ್ರೇಲಿಯಾ | – | ಇ) ಟೆನ್ನಿಸ್ |
| ೪. ಭಾರತ | – | ಈ) ಬೇಸ್‌ಬಾಲ್ |
| | | ಉ) ರಗ್ಬಿ |
| | | ಊ) ಹಾಕಿ |

**ನಮ್ಮ ಉತ್ತಮ ಭವಿಷ್ಯವನ್ನು ನಿರ್ಮಿಸಿಕೊಳ್ಳುವವರು ನಾವೇ ಎಂಬುದು ಖಂಡಿತ – ಗಯಟೆ.**

## ಭಾಷಾಭ್ಯಾಸ

**೧. ಈ ಕೆಳಗಿನ ನುಡಿಗಟ್ಟುಗಳನ್ನು ನಿಮ್ಮದೇ ವಾಕ್ಯಗಳಲ್ಲಿ ಬಳಸಿರಿ ಮತ್ತು ಅವುಗಳನ್ನು ನಿಮ್ಮ ನಿತ್ಯದ ಭಾಷಾವ್ಯವಹಾರದಲ್ಲೂ ಬಳಸಿರಿ.**

ಹಿಂದೆಬೀಳು, ನೀರೆರೆದು ಪೋಷಿಸು, ಅಪೂರ್ವಸಾಧಕ, ಕಕ್ಕಾಬಿಕ್ಕಿಯಾಗು, ಕಣ್ಮುಂದೆ ಸುಳಿಯು, ಸೈ ಎನಿಸಿಕೊಳ್ಳು.

೨. ಕ್ರಿಕೆಟಿಗೆ ಸಂಬಂಧಿಸಿದ ಕೆಲವು ಕನ್ನಡ ಪದಗಳನ್ನು ಪಾಠದಲ್ಲಿ ಬಳಸಿದೆ. ಅವುಗಳ ಇಂಗ್ಲೀಷ್ ಮೂಲವನ್ನೂ, ಇನ್ನಷ್ಟು ಕ್ರಿಕೆಟ್ ಸಂಬಂಧಿ ಇಂಗ್ಲೀಷ್ ಪದಗಳಿಗೆ ಸಮನಾದ ಕನ್ನಡ ಪದಗಳನ್ನೂ ಗೆಳೆಯರೊಂದಿಗೆ ಸ್ಪರ್ಧಾತ್ಮಕವಾಗಿ ಪಟ್ಟಿಮಾಡಿರಿ.

೩. ಈ ಪಾಠದ ಮೊದಲ ವಾಕ್ಯವೃಂದದಲ್ಲಿ ೮೫ ಪದಗಳಿವೆ. ಈ ಭಾಗವನ್ನು ಮೂಲಾರ್ಥಕ್ಕೆ ಭಂಗ ಬರದಂತೆ ಸುಮಾರು ೩೦ ಶಬ್ದಗಳಲ್ಲಿ ಸಂಗ್ರಹಿಸಿರಿ.

## ಚಟುವಟಿಕೆ

೧. ನಿಮ್ಮ ಆಸಕ್ತಿಯ ಆಟದ ಬಗ್ಗೆ ಒಂದು ಪ್ರಬಂಧವನ್ನು ಬರೆಯಿರಿ.
೨. ನಿಮ್ಮ ನೆಚ್ಚಿನ ಆಟದ ಅಸಾಮಾನ್ಯ ಸಾಧಕರ ಬಗ್ಗೆ ವಿಷಯ ಸಂಗ್ರಹಿಸಿ ಅದನ್ನು ಪುಟ್ಟ ಲೇಖನವನ್ನಾಗಿಸಿ, ಶಾಲೆಯ ಭಿತ್ತಿಪತ್ರಿಕೆಯಲ್ಲಿ ಪ್ರದರ್ಶಿಸಿ.
೩. ನಿಮ್ಮೂರಿನ ಜನಪದ ಆಟಗಳ ಪರಿಚಯ ಮಾಡಿಕೊಂಡು ಗೆಳೆಯರೊಂದಿಗೆ ಆಡುವ ಆಸಕ್ತಿಯನ್ನು ಬೆಳೆಸಿಕೊಳ್ಳಿ. ಉದಾ – ಚೆನ್ನೆಮಣೆ, ಲಗೋರಿ, ಚಿನ್ನಿದಾಂಡು ಇತ್ಯಾದಿ.
೪. ಭಾರತದ ಕ್ರಿಕೆಟ್ ಸಂಸ್ಥೆಯಿಂದ ಮಾನ್ಯತೆ ಪಡೆದ ಕ್ರಿಕೆಟ್ ಪಂದ್ಯಗಳ ಪಟ್ಟಿಮಾಡಿರಿ.
೫. ರಾಹುಲ್ ದ್ರಾವಿಡರು ಮಾಡಿದ ಇನ್ನಿತರ ಮುಖ್ಯ ದಾಖಲೆಗಳನ್ನು ಪಟ್ಟಿಮಾಡಿರಿ.



## ವ್ಯಾಕರಣಾಂಶ

**ಸಂಸ್ಕೃತ ಸಂಧಿ :** ಬಿಡಿ ಪದಗಳಂತೆಯೇ ಸಂಧಿಯಾಗಿರುವ ಸಂಸ್ಕೃತದ ಅನೇಕ ಪದಗಳು ಕನ್ನಡದಲ್ಲಿ ಇವೆ. ಅವುಗಳ ಪದವಿಂಗಡಣೆಯನ್ನೂ, ಸಂಧಿಕಾರ್ಯವನ್ನೂ ತಿಳಿದುಕೊಳ್ಳುವುದು ಅಗತ್ಯ. ಸಂಸ್ಕೃತ ಪದಗಳೆರಡು ಸೇರುವಾಗ ಆಗುವುದೇ ಸಂಸ್ಕೃತ ಸಂಧಿ. ಎರಡೂ ಪದ ಸಂಸ್ಕೃತವಾಗಿದ್ದರೂ ಕನ್ನಡದ ಪ್ರತ್ಯಯನಡುವೆ ಇದ್ದರೆ ಆಗ ಸಂಸ್ಕೃತ ಸಂಧಿ ಆಗುವುದಿಲ್ಲ. ಕನ್ನಡದಲ್ಲಿ ಇದ್ದ ಹಾಗೆಯೇ ಇಲ್ಲೂ ಸ್ವರಸಂಧಿ ಮತ್ತು ವ್ಯಂಜನ ಸಂಧಿ ಎಂದು ಎರಡು ವಿಧ ಇವೆ.

### ಸ್ವರ ಸಂಧಿಗಳು

ಮಹಾ+ಅನುಭಾವ–ಮಹಾನುಭಾವ (ಆ+ಅ=ಆ)

ಗುರು+ಉಪದೇಶ–ಗುರೂಪದೇಶ (ಉ+ಉ=ಊ)

ಗಿರಿ+ಇಂದ್ರ–ಗಿರೀಂದ್ರ (ಇ+ಇ=ಈ)

**ದೇಶದಲ್ಲಿರುವವರೆಲ್ಲರೂ ದೇಶಪ್ರೇಮಿಗಳಾದರೆ ಪರಕೀಯರ ಧಾಳಿ ಅಸಾಧ್ಯ – ಸುಭಾಷ್ ಚಂದ್ರ ಬೋಸ್.**

ಅ,ಆ; ಇ,ಈ; ಉ,ಊ ಇವು ಸವರ್ಣ ಸ್ವರಗಳು, ಇವು ಪರಸ್ಪರ ಸೇರಿದಾಗ ಅದೇ ವರ್ಣದಲ್ಲಿಯ ದೀರ್ಘಸ್ವರ ಬರುತ್ತದೆ. ಅದೇ ಸವರ್ಣದೀರ್ಘಸಂಧಿ.

**ಈ ಪದಗಳನ್ನು ಗಮನಿಸಿ.**

ವೀರ+ಈಶ್ವರ–ವೀರೇಶ್ವರ – ಅ+ಈ=ಏ

ಮಹಾ+ಉತ್ಸವ–ಮಹೋತ್ಸವ – ಆ+ಉ=ಓ

ರಾಜ+ಋಷಿ–ರಾಜರ್ಷಿ – ಅ+ಋ=ಅರ್

ಸಂಸ್ಕೃತ ಪದದಲ್ಲಿಯ 'ಅ' ವರ್ಣ (ಹ್ರಸ್ವ ಮತ್ತು ದೀರ್ಘಸ್ವರ) ದ ಮುಂದೆ 'ಇ' ವರ್ಣ ಬಂದಾಗ ಏಕಾರವೂ; 'ಉ' ವರ್ಣ ಬಂದಾಗ 'ಓ'ಕಾರವೂ, 'ಋ' ವರ್ಣ ಬಂದಾಗ 'ಅರ್' ಕಾರವು ಆದೇಶವಾಗುವುದೇ **ಗುಣಸಂಧಿ**ಯ ನಿಯಮ.

**ಈ ಪದಗಳನ್ನು ಗಮನಿಸಿ:–**

ಅತಿ+ಉಕ್ತಿ–ಅತ್ಯುಕ್ತಿ – ಇ+ಉ=ಯ್

ಮನು+ಅಂತರ–ಮನ್ವಂತರ – ಉ+ಅ=ವ್

ಪಿತೃ+ಅರ್ಜಿತ – ಋ+ಅ=ರ್‌ಕಾರ

ಇ,ಈ,ಉ,ಊ ಋ, ೠ ಗಳಿಗೆ ಅನ್ಯಸ್ವರಗಳು ಪರವಾದಾಗ 'ಇ'ವರ್ಣಕ್ಕೆ 'ಯ್' ಕಾರವೂ, 'ಉ' ವರ್ಣಕ್ಕೆ 'ವ್' ಕಾರವೂ, 'ಋ' ವರ್ಣಕ್ಕೆ 'ರ್' ಆದೇಶವಾಗಿ ಬಂದಿರುವುದು ಮೇಲಿನ ಉದಾಹರಣೆಯಲ್ಲಿ ತಿಳಿದು ಬರುತ್ತದೆ. ಹೀಗಾದಾಗ ಅದನ್ನು **ಯಣ್ ಸಂಧಿ** ಎಂದು ಕರೆಯುತ್ತಾರೆ.



ಭಾವ+ಐಕ್ಯ=ಭಾವೈಕ್ಯ – ಅ+ಐ=ಐ

ಏಕ+ಏಕ=ಏಕೈಕ – ಅ+ಏ=ಐ

ಮಹಾ+ಓಷಧಿ =ಮಹೌಷಧಿ= ಆ+ಓ=ಔ

ದಿವ್ಯ+ಔಷಧಿ=ದಿವ್ಯೌಷಧಿ – ಅ+ಔ=ಔ

ಇಲ್ಲಿ ಪೂರ್ವ ಪದಾಂತವು 'ಅ' ವರ್ಣವಾಗಿದೆ. ಇದಕ್ಕೆ 'ಏ' ಅಥವಾ 'ಐ' ಪರವಾದಾಗ ಐಕಾರ ಬಂದಿದೆ. ಹಾಗೆಯೇ 'ಅ' ವರ್ಣಕ್ಕೆ 'ಓ' ಅಥವಾ 'ಔ' ಪರವಾದಾಗ ಔಕಾರ ಬಂದಿದೆ. ಇದನ್ನು ನೀವು ಗಮನಿಸಿದ್ದೀರಿ. ಇದನ್ನು **ವೃದ್ಧಿ ಸಂಧಿ** ಎಂಬುದಾಗಿ ಕರೆಯುತ್ತಾರೆ.

ಈ ನಾಲ್ಕೂ ಸಂಸ್ಕೃತದ ಸ್ವರಸಂಧಿಗಳಾಗಿವೆ.

ಈ ಪಠ್ಯಪುಸ್ತಕದಲ್ಲಿರುವ ಸಂಸ್ಕೃತ ಸ್ವರಸಂಧಿಗಳನ್ನು ಆಯ್ದು ಪಟ್ಟಿಮಾಡಿ, ಸಂಧಿಯ ಹೆಸರನ್ನು ಬರೆಯಿರಿ– ಈ ಕುರಿತು ನಿಮ್ಮ ಸ್ನೇಹಿತರ ನಡುವೆ ಸ್ಪರ್ಧೆಯೊಂದನ್ನು ಹಮ್ಮಿಕೊಳ್ಳಿರಿ.



**ಶ್ರೀಮಂತಿಕೆಗಿಂತ ಹೃದಯವಂತಿಕೆ ಮೇಲು – ಸಾಕ್ರೆಟಿಸ್.**

## ಗದ್ಯ ಪಾಠ – ೩

# ಗಾನಯೋಗಿ ಪಂಡಿತ ಪುಟ್ಟರಾಜ ಗವಾಯಿ

– *ಸಂಪಾದಿತ*

**ಪಾಠ ಪ್ರವೇಶ:** ಉನ್ನತವಾದ ಗುರಿಯನ್ನು ಬೆಂಬತ್ತಲು ಯಾವುದೇ ರೀತಿಯ ದೈಹಿಕನ್ಯೂನತೆಗಳು ಎಂದೂ ಅಡ್ಡಿಯಾಗಲಾರವು. ಅದರೊಂದಿಗೆ ಅಸಾಧ್ಯವಾದುದನ್ನು ಸಾಧಿಸಬೇಕೆಂಬ ಛಲವೂ ಸೇರಿಕೊಂಡರೆ ಗುರಿಯು ಮತ್ತೂ ಹತ್ತಿರವಾಗುತ್ತದೆ. ಅದಕ್ಕೆ ಅಂಗವಿಕಲರ ಒಲಿಂಪಿಕ್ಸ್ ಉತ್ತಮ ಉದಾಹರಣೆ. ಅಂಗವಿಕಲರಾಗಿದ್ದರೂ ಕ್ರೀಡಾಕ್ಷೇತ್ರದಲ್ಲಿ ಮಾಲತಿ ಹೊಳ್ಳ, ಭರತನಾಟ್ಯದಲ್ಲಿ ಸುಧಾಚಂದ್ರನ್, ವೈಜ್ಞಾನಿಕ ರಂಗದಲ್ಲಿ ಸ್ಟೀಪನ್ ಹಾಕಿಂಗ್–ಅಂತಹವರ ಹೆಸರು ಹಲವು. ಈ ಹಲವರಲ್ಲಿ ಪುಟ್ಟರಾಜ ಗವಾಯಿಗಳೂ ಒಬ್ಬರು. ಅಂಧರಾಗಿದ್ದರೂ ಹಲವಾರು ರಂಗದಲ್ಲಿ ಅದ್ವಿತೀಯರು. ಇಂತಹ ಪ್ರಸಿದ್ಧರೆಲ್ಲರ ಸಾಧನೆಯು ಪೂರ್ಣಾಂಗರಾದ ನಮಗೆ ಆದರ್ಶವಾಗಬೇಕು; ಅದು ನಮ್ಮ ಒಳಗಣ್ಣನ್ನು ತೆರೆಯಿಸಬೇಕು





ಪುಟ್ಟರಾಜ ಎನ್ನುವುದು ಕೇವಲ ಒಂದು ಹೆಸರಲ್ಲ, ಅದೊಂದು ಚೇತನ. ಕುರುಡರಾಗಿದ್ದರೂ ಕಣ್ಣಿದ್ದವರ ಕಣ್ಣು ತೆರೆಯಿಸಿದ ಮಹಾಶಕ್ತಿ; ಅಂಧರ, ಅನಾಥರ ಪಾಲಿನ ತಣ್ಣನೆಯ ಬೆಳಕು; ಸಂಗೀತಲೋಕದ ಮಹಾಶಿಖರವನ್ನೇರಿ ಜನಮಾನಸದಲ್ಲಿ ಶಾಶ್ವತ ಸ್ಥಾನಗಳಿಸಿಕೊಂಡ ಮಹಾತ್ಮ.

ತಲೆಯಮೇಲೊಂದು ಅಂದವಾಗಿ ಶಿಸ್ತಿನಿಂದ ಸುತ್ತಿದ ಕಾವಿಬಣ್ಣದ ಪಟಗಾ, ಹಣೆಯಲ್ಲಿ ಸದಾ ಎದ್ದುಕಾಣುವ ವಿಭೂತಿ, ಹುಬ್ಬುಗಳೆರಡರ ನಡುವೆ ಗಂಧದ ಬೊಟ್ಟು, ಕೊರಳಲ್ಲಿ ರುದ್ರಾಕ್ಷಿಮಾಲೆ, ಕೊಂಚವೇ ಬಾಗಿದ ಕತ್ತು, ಕೈಯಲ್ಲೊಂದು ಊರುಗೋಲು– ಪುಟ್ಟರಾಜರು ಎಂದರೆ ಕಣ್ಣಿನ ಮುಂದೆ ನಿಲ್ಲುವ ಚಿತ್ರ ಇದು.

**ಮುಂದಿನ ಜಗತ್ತಿನ ಒಳಿತಿಗೆ ಹಿಂದಿನ ಇತಿಹಾಸ ದಾರಿದೀಪ – ಅಂಬ್ರೋಸ್ ಬೈರಸ್.**

ಎಲ್ಲೆಯಿರದ ಸೇವಾಕ್ಷೇತ್ರ ಇವರದಾಗಿದ್ದರೂ ಸರಳ ಜೀವಿ. ಸಂಗೀತಲೋಕವನ್ನು ತಮ್ಮ ಹೊಸಹೊಸ ರಾಗಗಳಿಂದ ಶ್ರೀಮಂತಗೊಳಿಸಿದ ವಾಗ್ಗೇಯಕಾರ, ಹಲವು ಪ್ರಕಾರಗಳ ವಾದ್ಯಪ್ರವೀಣ, ಶ್ರೇಷ್ಠ ಸಾಹಿತಿ, ಸಮಾಜ ಚಿಂತಕ, ನಾಟಕರಂಗವಿಹಾರಿ, ಶೈಕ್ಷಣಿಕಕ್ಷೇತ್ರದ ಸಾಧಕ, ಆಧ್ಯಾತ್ಮಿಕ ಗುರು– ಇದು ಅವರ ಸಂಕ್ಷಿಪ್ತ ಪರಿಚಯ.

ಇಂತಹ ಮಹಿಮಾವಂತರಿಂದ ಪಾವನಗೊಂಡ ಊರು ಹಾವೇರಿ ಜಿಲ್ಲೆಯ ದೇವಗಿರಿ. ಇವರ ಜನನ ೦೩–೦೩–೧೯೧೪ರಲ್ಲಿ ಆಯಿತು. ತಂದೆ ರೇವಣ್ಣಯ್ಯ, ತಾಯಿ ಸಿದ್ದಮ್ಮ. ಆರು ತಿಂಗಳ ಕೂಸು ಆಗಿರುವಾಗಲೇ ವಿಧಿಯು ಬಾಲಕನ ದೃಷ್ಟಿಯನ್ನು ಕಸಿದುಕೊಂಡಿತ್ತು. ಆದರೆ ಇದೇ ಮುಂದಿನ ದಿನಗಳಲ್ಲಿ ತನ್ನಂತಹ ಕಣ್ಣು ಕಳೆದುಕೊಂಡ ಸಹಸ್ರಾರು ನತದೃಷ್ಟರ ಬದುಕನ್ನು ಸುಂದರಗೊಳಿಸಲು ಕಾರಣವಾಯಿತು. ಮತ್ತೆ ಕೆಲವೇ ತಿಂಗಳುಗಳಲ್ಲಿ ತಂದೆ ತಾಯಿ ವಿಧಿವಶರಾದಾಗ ವಸ್ತುತಃ ನಿರ್ಗತಿಕರೇ ಆದರು. ಇದು ಅವರನ್ನು ತಲ್ಲಣಗೊಳಿಸಿದರೂ ಸೋದರಮಾವರಾದ ಚಂದ್ರಶೇಖರಯ್ಯರವರಿಂದಾಗಿ ಪರದೇಶಿಯಾಗಲಿಲ್ಲ. ತಮ್ಮ ಅಳಿಯನ ಸೂಕ್ಷ್ಮಮತಿ, ಕಲಿಕೆಯಲ್ಲಿಯ ಏಕಾಗ್ರತೆಯನ್ನು ಕಂಡು ತಮ್ಮ ಗುರುಗಳಾಗಿದ್ದ ಗದಗದ ಪಂಚಾಕ್ಷರಿ ಗವಾಯಿ ಅವರ ಸುಪರ್ದಿಗೆ ಒಪ್ಪಿಸಿದರು. ಇದರಿಂದಾಗಿ ನಾಡಿಗೊಬ್ಬ ದಾರ್ಶನಿಕ ದೊರಕಿದಂತಾಯಿತು.

ಪುಟ್ಟಯ್ಯನಲ್ಲಿದ್ದ ಸಂಗೀತದ ಆಸಕ್ತಿಯನ್ನು ಗಮನಿಸಿದ ಪಂಚಾಕ್ಷರಿ ಗವಾಯಿಯವರು ತಮ್ಮ ಶಿಷ್ಯನಿಗೆ ಸಂಗೀತದ ಶಿಕ್ಷಣ ಕೊಡಿಸಿದ್ದಲ್ಲದೆ, ಕನ್ನಡ ಮತ್ತು ಸಂಸ್ಕೃತ ಸಾಹಿತ್ಯದ ಪರಿಚಯವನ್ನೂ ಮಾಡಿಸಿದರು. ಗುರೂಪದೇಶದಂತೆ, ಸಂಗೀತದೊಂದಿಗೆ ಸತತ ಪರಿಶ್ರಮ ಮತ್ತು ಶ್ರದ್ಧೆಯಿಂದ ಸ್ವರಮಂಡಲ, ಸಾರಂಗಿ, ಸರೋದ, ಪಿಟೀಲು, ಹಾರ್ಮೋನಿಯಂ ಮತ್ತು ತಬಲಾವಾದನದಲ್ಲಿ ಪ್ರಾವೀಣ್ಯವನ್ನು ಪಡೆದರು. ಹಿಂದುಸ್ತಾನಿ–ಕರ್ನಾಟಕ ಶೈಲಿಯ ಹಾಡುಗಾರಿಕೆಯಲ್ಲಿ ಸಿದ್ಧಿಗಳಿಸಿದರು; ಅಂಧರ ಓದಿನ ಬ್ರೈಲ್ ಲಿಪಿಯನ್ನು ಕಲಿತರು.

ಸಂಸ್ಕೃತವನ್ನು ಆಳವಾಗಿ ಅಧ್ಯಯನ ಮಾಡಿದ್ದರೂ ಅವರಿಗೆ ಕನ್ನಡದ ಮೇಲೆ ಅಭಿಮಾನ ಬಹಳವಾಗಿತ್ತು. ಆದುದರಿಂದಲೇ ಕನ್ನಡದಲ್ಲಿ ಅರವತ್ತಕ್ಕೂ ಹೆಚ್ಚಿನ ಸಂಖ್ಯೆಯ ಕೃತಿರಚನೆ ಸಾಧ್ಯವಾಯಿತು. ಅದರಲ್ಲಿ ಕಲಬುರ್ಗಿಯ ಶರಣ ಬಸವೇಶ್ವರ, ಶ್ರೀಶಿವಲಿಂಗೇಶ್ವರ, ನಾಲತ್ವಾಡದ ವೀರೇಶ್ವರ, ಅಂಕಲಗಿ ಅಡವಿ ಸಿದ್ಧೇಶ್ವರ, ಗುಡ್ಡಾಪುರದ ದಾನಮ್ಮ ಮೊದಲಾದ ಹದಿನೆಂಟು ನಾಟಕಗಳೂ ಸೇರಿವೆ. ಸಂಸ್ಕೃತದ ಸಿದ್ಧಾಂತ ಶಿಖಾಮಣಿಯನ್ನೂ ಕನ್ನಡದ ಬಸವೇಶ್ವರ ಮತ್ತು ಶ್ರೀ ಸಿದ್ಧಲಿಂಗೇಶ್ವರ ವಿಜಯ ಪುರಾಣಗಳನ್ನೂ ಹಿಂದಿಗೆ ಅನುವಾದಿಸಿದ್ದರು. ಭಗವದ್ಗೀತೆ ಹಾಗೂ ಉಪನಿಷತ್ತುಗಳನ್ನು ಬ್ರೈಲ್‌ಲಿಪಿಗೆ ತಂದು ಅಂಧರಿಗೆ ನೆರವಾಗಿದ್ದರು. ಸಂಗೀತ ಶಾಸ್ತ್ರಕ್ಕೆ ಸಂಬಂಧಿಸಿದಂತೆ ಎರಡು ಭಾಗದಲ್ಲಿ 'ಗಾನಸುಧ'ವನ್ನೂ 'ತಾಲ ಪಂಚಾಕ್ಷರಿ' ಮುಂತಾದ ಕೃತಿಗಳನ್ನೂ ರಚಿಸಿದ್ದರು. 'ಪಂಚಾಕ್ಷರಿವಾಣಿ' ಎಂಬ ದಾರ್ಶನಿಕ ಪತ್ರಿಕೆಗೆ ಮಾರ್ಗದರ್ಶಕರು ಆಗಿದ್ದರು.

'ಶ್ರೀ ಕುಮಾರೇಶ್ವರ ನಾಟ್ಯಸಂಘ'ವನ್ನು ಸ್ಥಾಪಿಸಿ ನಾಡಿನಾದ್ಯಂತ ಶಿವಶರಣರ ಕುರಿತು ತಾವು ರಚಿಸಿದ್ದ ನಾಟಕಗಳನ್ನಾಡಿಸಿ ಧರ್ಮಜಾಗೃತಿಗೊಳಿಸಿದ್ದರು. ಪಂಚಾಕ್ಷರಿ ಗವಾಯಿಗಳ ನಿಧನಾನಂತರ ಗದುಗಿನ ವೀರೇಶ್ವರ ಪುಣ್ಯಾಶ್ರಮದ ಸಮಸ್ತ ಜವಾಬ್ದಾರಿಯನ್ನುಹೊತ್ತು ಶಿಕ್ಷಣ ಸಂಸ್ಥೆಗಳನ್ನು ವಿಸ್ತರಿಸುತ್ತಾ ಸಹಸ್ರಾರು ಬಡಮಕ್ಕಳ

**ಮಾನವನ ಅಮಾನವೀಯತೆಯೇ ಅನೇಕ ಅನಾಹುತಗಳಿಗೆ ಕಾರಣ – ವಿಲಿಯಂ ಬ್ಲೇಕ್.**

ಜ್ಞಾನದಾಹವನ್ನು ಹಿಂಗಿಸಿದ್ದರು. ಅವರ ಅಪಾರವಾದ ಶಿಷ್ಯಬಳಗವು ಈ ಕಾರಣಕ್ಕಾಗಿಯೇ ಅವರನ್ನು ಈಗಲೂ ನೆನಪಿಸಿಕೊಳ್ಳುತ್ತಿದೆ.

ಅವರ ಸಾಧನೆಗಳಿಗೆ ಸಂದ ಪುರಸ್ಕಾರಗಳು ಹಲವು. ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್ (೧೯೭೫), ಕರ್ನಾಟಕ ಸರಕಾರದ ರಾಜ್ಯನಾಟಕ ಅಕಾಡಮಿ ಪ್ರಶಸ್ತಿ (೧೯೯೦), ಹಂಪಿಯ ಕನ್ನಡ ವಿಶ್ವವಿದ್ಯಾಲಯದಿಂದ ನಾಡೋಜ ಪ್ರಶಸ್ತಿ(೧೯೯೯), ಬಸವಶ್ರೀ ಪ್ರಶಸ್ತಿ (೨೦೦೦) ಗಳನ್ನಲ್ಲದೆ ಮಧ್ಯಪ್ರದೇಶ ಸರಕಾರದ ಪ್ರತಿಷ್ಠಿತ ಪ್ರಶಸ್ತಿಯಾಗಿರುವ ಕಾಳಿದಾಸ ಸಂಮಾನ್ ಅನ್ನೂ (೨೦೦೭) ಪಡೆದಿದ್ದರು. ೨೦೧೦ ರಲ್ಲಿ ಭಾರತ ಸರಕಾರದಿಂದ ಪದ್ಮಭೂಷಣ ಪ್ರಶಸ್ತಿಗೆ ಭಾಜನರಾಗಿದ್ದರು. ಹಾವೇರಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ (೨೦೦೧) ದ ಅಧ್ಯಕ್ಷರಾಗಿ ಆಯ್ಕೆಗೊಂಡದ್ದು ಅವರ ಸಾಹಿತ್ಯಕೃಷಿಗೆ ಸಂದ ಗೌರವವಾಗಿತ್ತು. ಇವುಗಳಲ್ಲದೆ ಇವರ ಶೈಕ್ಷಣಿಕ, ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳಿಗೆ ಪ್ರತಿಯಾಗಿ ನಾಡಿನಾದ್ಯಂತ ೧೬೩೫ ಬಾರಿ ತುಲಾಭಾರ ನಡೆದಿದೆಯೆಂದರೆ ಅವರ ಜನಪ್ರಿಯತೆಗೆ ಬೇರೆ ಸಾಕ್ಷಿ ಬೇಡ.

'ನನಗೆ ಮುಂದಿನ ಜನ್ಮವಿದ್ದುದೇ ಆದರೆ ನಾನು ಕುರುಡನಾಗಿ ಹುಟ್ಟುವುದನ್ನು ಬಯಸುತ್ತೇನೆ.' ಇದು ಅವರ ಬಯಕೆ. ಅವರ ಈ ಪ್ರಾರ್ಥನೆಯ ಹಿಂದೆ ಕಣ್ಣಿಲ್ಲದೇ ಇರುವವರ ಬಗೆಗಿನ ಅವರ ತಾಯ್ತನದ ಕಾಳಜಿಯನ್ನು ಗಮನಿಸಬಹುದು. ಕಣ್ಣಿದ್ದವರಿಗಿಂತಲೂ ಹೆಚ್ಚಾಗಿ ಸಾಧನೆಗೈದ ವಿಶಿಷ್ಟಸಾಧಕ, ಸಂಗೀತನಕ್ಷತ್ರ, ಗಾನಯೋಗಿ, ಉಭಯಗಾನವಿಶಾರದ, ಗಾಯನ ಭಾಸ್ಕರ, ಅಂಧರ ಪಾಲಿನ ದೈವ ಈ ಮೊದಲಾದ ಹತ್ತಾರು ವಿಶೇಷಣಗಳಿಂದ ಜನಪ್ರಿಯರಾಗಿದ್ದ ಡಾ॥ ಪಂಡಿತ ಪುಟ್ಟರಾಜಗವಾಯಿಯವರು ೧೭.೯.೨೦೧೦ ರಲ್ಲಿ ಅನಂತದಲ್ಲಿ ಲೀನರಾದರು. ಈ ಸುದ್ದಿ ಹರಡುತ್ತಿದ್ದಂತೆ ವೀರೇಶ್ವರ ಪುಣ್ಯಾಶ್ರಮದಲ್ಲಿ ಮಹಾಮೌನ ಕವಿಯಿತು. ಜೀವವು ಮರಳಿ ಚಲನಗೊಂಡಾಗ ಹೊರಟ ಉದ್ಗಾರ ಒಂದೇ "ಪುಟ್ಟರಾಜ, ಇನ್ನೊಮ್ಮೆ ಕನ್ನಡ ನಾಡಲ್ಲಿ ಹುಟ್ಟಿ ಬಾ".



## ಅರ್ಥ ತಿಳಿಯಿರಿ

**ಚೇತನ** – ಚಟುವಟಿಕೆ, ಶಕ್ತಿ. **ಜನಮಾನಸ**– ಜನರ ಮನಸ್ಸು. **ಅಂಧ**–ಕುರುಡ **ಪಟಗಾ**–ರುಮಾಲು **ಬೊಟ್ಟು**–ದುಂಡನೆಯ ತಿಲಕ. **ಎಲ್ಲೆ**–ಮೇರೆ. **ವಾಗ್ಗೇಯಕಾರ**– ಶಾಸ್ತ್ರೀಯ ಸಂಗೀತದಲ್ಲಿ ಹಾಡುಗಳ ರಚನಕಾರ ಮತ್ತು ಹಾಡುಗಾರ ಎರಡೂ ಆಗಿರುವವ. **ಪ್ರವೀಣ**–ಪರಿಣಿತ, ತಜ್ಞ. **ವಿಹಾರಿ**–ವಿಹರಿಸುವವ. **ನತದೃಷ್ಟ**– ಅದೃಷ್ಟಹೀನ. **ಒಳಗಣ್ಣು**–ಮನಸ್ಸು. **ವಸ್ತುತಃ**–ನಿಜವಾಗಿ. **ತಲ್ಲಣ**–ಕಳವಳ. **ಪರದೇಶಿ**–ಅನಾಥ, ಗತಿಹೀನ. **ಸುಪರ್ದಿ**–ರಕ್ಷಣೆ. **ದಾರ್ಶನಿಕ**–ತತ್ತ್ವಜ್ಞಾನಿ, ದರ್ಶನಕ್ಕೆ ಸಂಬಂಧಪಟ್ಟದ್ದು. (**ದರ್ಶನ**–ಧರ್ಮ, ತತ್ತ್ವ, ಶಾಸ್ತ್ರಗಳ ಕುರಿತಾಗಿರುವ ಒಳನೋಟ. ದಾರ್ಶನಿಕ ಪದದಂತೆಯೇ ಧಾರ್ಮಿಕ, ತಾತ್ವಿಕ, ಮಾಂತ್ರಿಕ ಮುಂತಾದ ಪದಗಳಿವೆ.) **ಪುರಸ್ಕಾರ**– ಸನ್ಮಾನ, ಗೌರವ. **ಜಾಗೃತಿ**–ಎಚ್ಚರ. **ಹಿಂಗಿಸು**–ಅಡಗಿಸು, ಬತ್ತಿಸು. **ತುಲಾಭಾರ**– ತಕ್ಕಡಿಯಲ್ಲಿ ವಿವಿಧ ವಸ್ತುಗಳನ್ನಿರಿಸಿ ವ್ಯಕ್ತಿಯನ್ನು ತೂಗುವುದು (ತುಲಾ–ತಕ್ಕಡಿ). **ಲೀನ**–ಸೇರು, ಐಕ್ಯ. **ಭಾಜನ**–ಪಾತ್ರ.

**ಶ್ರೇಷ್ಠ ಮಾನವನ ಬದುಕಿನ ಗುರಿಯೇ ಸತ್ಯದ ಆಚರಣೆ – ಕನ್‌ಫ್ಯೂಷಿಯಸ್.**

## ಗಮನಿಸಿ

**ಬ್ರೈಲ್ ಲಿಪಿ:** ಕಣ್ಣಿನ ದೃಷ್ಟಿ ಇಲ್ಲದವರು ಓದುವ ಲಿಪಿ. ಇಲ್ಲಿ ಬೆರಳ ಸ್ಪರ್ಶಜ್ಞಾನದಿಂದ ಅಕ್ಷರವನ್ನು ತಿಳಿಯಲಾಗುತ್ತದೆ.

**ಗೌರವ ಡಾಕ್ಟರೇಟ್** : ಹಿರಿಯ ವಿದ್ವಾಂಸರ ಮಾರ್ಗದರ್ಶನದಲ್ಲಿ ಸಂಶೋಧನಾತ್ಮಕ ಮಹಾಪ್ರಬಂಧವನ್ನು ರಚಿಸಿ ಯಶಸ್ವಿಯಾದವರಿಗೆ 'ಡಾಕ್ಟರೇಟ್' ಪದವಿಯನ್ನು ವಿಶ್ವವಿದ್ಯಾನಿಲಯವು ನೀಡುತ್ತದೆ. ಹಾಗೆ ಮಾಡದೇ ಇದ್ದರೂ ಸಮಾಜದ ಅಸಾಧಾರಣ ಸಾಧಕರಿಗೆ ವಿಶ್ವವಿದ್ಯಾನಿಲಯಗಳು ಗೌರವ ರೂಪದಲ್ಲಿ ನೀಡುವಂತಹುದು ಗೌರವ ಡಾಕ್ಟರೇಟ್.

## ಅಭ್ಯಾಸ

**I. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. ಪುಟ್ಟರಾಜರ ಹುಟ್ಟೂರು ಯಾವುದು?

೨. ಅಂಧತ್ವವು ಪುಟ್ಟರಾಜರ ಪಾಲಿಗೆ ಏಕೆ ದುರಂತವಾಗಲಿಲ್ಲ?

೩. ಪುಟ್ಟರಾಜರ ಸೋದರಮಾವನು ಇವರನ್ನು ಪಂಚಾಕ್ಷರಿ ಗವಾಯಿಗಳಿಗೆ ಏಕೆ ಒಪ್ಪಿಸಿದರು?

೪. ಭಾರತೀಯ ಸಂಗೀತದ ಎರಡು ಶೈಲಿ ಯಾವುದು?

೫. ಪುಟ್ಟರಾಜರ ಹಿಂದಿ ಭಾಷೆಯ ಪ್ರಾವೀಣ್ಯಕ್ಕೆ ಸಾಕ್ಷಿಯಾವುದು?

೬. ಪುಟ್ಟರಾಜರಿಗೆ ಜನರಿಂದ ಸಂದ ಪುರಸ್ಕಾರ ಯಾವುದು?

೭. ಶ್ರೇಷ್ಠ ಸಾಧಕರನ್ನು ಗುರುತಿಸುವ ಮಧ್ಯಪ್ರದೇಶದ ಪುರಸ್ಕಾರ ಯಾವುದು?

೮. ಕಲಿಕೆಗೆ ಮುಖ್ಯವಾಗಿ ಇರಬೇಕಾದುದು ಯಾವುದು?

೯. ಪುನರ್ಜನ್ಮವಿದ್ದುದೇ ಆಗಿದ್ದಲ್ಲಿ ಪುಟ್ಟರಾಜರ ಬಯಕೆ ಏನಾಗಿತ್ತು?

**II. ಮೂರುನಾಲ್ಕು ವಾಕ್ಯಗಳಲ್ಲಿ ಈ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

೧. ಪುಟ್ಟರಾಜರೆಂದರೆ ಕಣ್ಣಿಗೆ ಕಟ್ಟುವ ಚಿತ್ರ ಯಾವುದು?

೨. ನಾಟಕ ಕ್ಷೇತ್ರಕ್ಕೆ ಪುಟ್ಟರಾಜರ ಕೊಡುಗೆ ಏನಾಗಿತ್ತು?

೩. ಪುಟ್ಟರಾಜರನ್ನು ಸಂಕ್ಷಿಪ್ತವಾಗಿ ಪರಿಚಯಿಸಿ.

೪. ಪುಟ್ಟರಾಜರಿಗೆ ದೊರೆತ ಪ್ರಶಸ್ತಿಗಳಾವುವು?

೫. ಸಂಗೀತಕ್ಕೆ ಪುಟ್ಟರಾಜರ ಕೊಡುಗೆ ಯಾವುದಾಗಿತ್ತು?

೬. ಅಸಹಾಯಕ ಅಂಧರಿಗೆ ಯಾವ ಮಾತುಗಳಿಂದ ನೀವು ಧೈರ್ಯ ತುಂಬುವಿರಿ?

**ಸಂತೋಷ ಎಲ್ಲರಿಗೂ ಬೇಕು, ಆದರೆ ಅದಕ್ಕಾಗಿ ಯಾರೂ ಕಷ್ಟಪಡಲು ಸಿದ್ಧರಿಲ್ಲ – ಮಹಾವೀರ.**

**III. ಈ ವಾಕ್ಯಗಳ ವಿಶೇಷ ಅರ್ಥವನ್ನು ಸಂದರ್ಭದೊಂದಿಗೆ ಸ್ಪಷ್ಟಪಡಿಸಿ.**

೧. ಕುರುಡರಾಗಿದ್ದರೂ ಕಣ್ಣಿದ್ದವರ ಕಣ್ಣು ತೆರೆಯಿಸಿದ ಮಹಾಶಕ್ತಿ.

೨. ಪುಟ್ಟರಾಜ, ಇನ್ನೊಮ್ಮೆ ಕನ್ನಡನಾಡಲ್ಲಿ ಹುಟ್ಟಿ ಬಾ

೩. ಅವರ ಜನಪ್ರಿಯತೆಗೆ ಬೇರೆ ಸಾಕ್ಷಿ ಬೇಡ

**IV. ಸುಮಾರು ಹತ್ತು ವಾಕ್ಯಗಳಲ್ಲಿ ಈ ಪ್ರಶ್ನೆಗಳಿಗೆ ಉತ್ತರ ಬರೆಯಿರಿ.**

೧. ಸಾಧನೆಗೆ ಅಂಗಹೀನತೆಯು ಅಡ್ಡಿಯಾಗದು ಎಂಬುದು ಪುಟ್ಟರಾಜರ ವಿಷಯದಲ್ಲಿ ನಿಜವಾಗಿದೆ, ಇದನ್ನು ಸಮರ್ಥಿಸಿ.

೨. ವಿಕಲಾಂಗರ ವಿಷಯದಲ್ಲಿ ನಮ್ಮ ಹೊಣೆಗಾರಿಕೆ ಯಾವುದು?

## ಭಾಷಾಭ್ಯಾಸ

**೧. ಈ ಕೆಳಗಿನ ನುಡಿಗಟ್ಟುಗಳನ್ನು ಬಳಸಿ ವಾಕ್ಯ ಮಾಡುವುದನ್ನು ಕಲಿತು ಅದನ್ನು ನಿಮ್ಮ ಬರೆಹದಲ್ಲಿ ರೂಢಿಸಿಕೊಳ್ಳಿ.**

ತಾಯ್ತನದ ಕಾಳಜಿ, ಬದುಕನ್ನು ಸುಂದರಗೊಳಿಸುವ, ಜ್ಞಾನದಾಹವನ್ನು ಹಿಂಗಿಸು, ಮಹಾಮೌನ ಕವಿಯಿತು, ಸತತ ಪರಿಶ್ರಮ.

**೨. ಕೆಳಗಿನ ಪದಗಳಿಗೆ ತದ್ಭವ ರೂಪಗಳನ್ನು ಬರೆಯಿರಿ.**

ದೃಷ್ಟಿ, ಸ್ಥಾನ, ಸಂಸ್ಕೃತ, ಯೋಗಿ, ಮೌನ, ವಿಧಿ, ವರ್ಣನೆ.

## ಚಟುವಟಿಕೆ

೧. ತಂತಿವಾದ್ಯ ಮತ್ತು ಚರ್ಮವಾದ್ಯಗಳ ಹೆಸರನ್ನು ಬರೆಯುವ ಸ್ಪರ್ಧೆಯನ್ನು ಇರಿಸಿಕೊಳ್ಳಿ. ಸಮಯದ ಮಿತಿಯೊಳಗೆ ನೆನಪಿಗೆ ಬರುವ ವಾದ್ಯಗಳ ಹೆಸರನ್ನು ಬರೆದು ಆ ಬಳಿಕ ಇತರರೊಂದಿಗೆ ಹೋಲಿಸಿ ನೋಡಿ.

೨. ನಿಮ್ಮೂರ ಸಾಧಕರೊಬ್ಬರ ಸಂದರ್ಶನ ನಡೆಸಿ ಅವರ ಹೇಳಿಕೆಗಳನ್ನು ದಾಖಲಿಸಿಕೊಳ್ಳಿ. ಅದರ ಸಹಾಯದಿಂದ ಅವರ ವ್ಯಕ್ತಿಚಿತ್ರಣದ ಲೇಖನವನ್ನು ಸಿದ್ಧಪಡಿಸಿ ಶಾಲಾ ಭಿತ್ತಿಪತ್ರಿಕೆಯಲ್ಲಿ ಪ್ರಕಟಿಸಿ.

೩. ವಿಕಲಾಂಗ ಸಾಧಕರಿದ್ದರೆ ಅವರನ್ನು ಸಂದರ್ಶಿಸಿ ಲೇಖನವನ್ನು ಸಿದ್ಧಪಡಿಸಿ ಸಹಪಾಠಿಗಳ ಮುಂದೆ ಓದಿರಿ.

೪. ಪತ್ರಿಕೆಯಲ್ಲಿ ಬರುವ ವಿಕಲಾಂಗರ ಪರಿಚಯಾತ್ಮಕ ಲೇಖನಗಳನ್ನು ಸಂಗ್ರಹಿಸಿಟ್ಟುಕೊಳ್ಳಿರಿ. ವಿಕಲಾಂಗರಿಗೆ ಧೈರ್ಯ ತುಂಬಲು ಇದರ ಸಹಾಯವನ್ನು ಪಡೆದುಕೊಳ್ಳಿರಿ.

**ಸತ್ಯವಂತರು ಸದಾ ಸರ್ವ ಸ್ವತಂತ್ರರು – ಬೈಬಲ್.**

## ವ್ಯಾಕರಣಾಂಶ

### ೧. ಸಮಾಸಗಳು:

ನೀರೆರೆ ಎಂಬಲ್ಲಿ ನೀರು ಎರೆ; 'ನಿಟ್ಟೋಟ'ದಲ್ಲಿ ನಿಟ್ಟ ಓಟ; ಅಗ್ರಗಣ್ಯದಲ್ಲಿ ಅಗ್ರ ಗಣ್ಯ – ಹೀಗೆ ಎರಡೆರಡು ಪದಗಳಿವೆ. ಅಕ್ಷರಗಳೆರಡು ಕಾಲವಿಳಂಬವಿಲ್ಲದೆ ಸೇರಿದರೆ 'ಸಂಧಿ' ಎಂದು ತಿಳಿದಿದ್ದೀರಿ. ನೀರು+ಎರೆ – ಇಲ್ಲಿ ಪೂರ್ವ ಪದಾಂತ್ಯದ 'ಉ'ತ್ವ ಲೋಪವಾಗಿ ಅಲ್ಲಿ ಉತ್ತರ ಪದದ ಆದಿಯ 'ಎ' ಬಂದು ನೀರೆರೆ ಎಂದು ಲೋಪ ಸಂಧಿ ಆಗಿದೆ. ಸಂಧಿಯ ಕೆಲಸ ಇಷ್ಟು ಮಾತ್ರ. ಆದರೆ ನೀರೆರೆ ಎಂಬ ಪದದ ಅರ್ಥ ಖಚಿತವಾಗಬೇಕಾದರೆ ನೀರನ್ನು ಎರೆ ಎಂದು ವಿಂಗಡಿಸಬೇಕಾಗುತ್ತದೆ. ಹಾಗೆಯೇ ನಿಡಿದು ಓಟ ಎಂಬುದಾಗಿ ವಿಂಗಡಿಸಬೇಕಾಗುತ್ತದೆ. ಹೀಗೆ ಅರ್ಥಕ್ಕೆ ಸರಿಹೊಂದುವಂತೆ ಮಾಡಿದ ಪದವಿಂಗಡನೆಯೇ 'ವಿಗ್ರಹ ವಾಕ್ಯ'. ಪದಗಳೆರಡು ಸೇರಿದರೆ ಅದು ಸಮಾಸಪದ. ಸಮಾಸದಲ್ಲಿ ಎರಡು ಪದಗಳಿರುತ್ತವೆ. ಪೂರ್ವ ಪದ ಮತ್ತು ಉತ್ತರಪದವೆಂದು ಕರೆಯಿಸಿಕೊಳ್ಳುವ ಈ ಭಾಗದಲ್ಲಿ ಯಾವುದರ ಅರ್ಥ ಮುಖ್ಯವಾಗಿರುತ್ತದೆಯೋ ಅದರ ಆಧಾರದ ಮೇಲೆ ಸಮಾಸವೂ ನಿರ್ಧರಿತವಾಗುತ್ತದೆ.

ಈಗ ಹಿಂದಿನ ಪಾಠದಲ್ಲಿ ಬಂದ ಕೆಲವು ಪದಗಳನ್ನು ಗಮನಿಸೋಣ.

ಮಾನವಶ್ರಮ, ಅಗ್ರಗಣ್ಯ, ಕುಲನಾಮ, ವಯೋಮಿತಿ ಇತ್ಯಾದಿಗಳು. ಈ ಪದಗಳ ಅರ್ಥವನ್ನು ಸ್ಪಷ್ಟಮಾಡಿಕೊಳ್ಳಬೇಕಾದರೆ ಅವುಗಳನ್ನು ಕ್ರಮವಾಗಿ ಮಾನವನ ಶ್ರಮ, ಅಗ್ರರಲ್ಲಿ ಗಣ್ಯ, ಕುಲದ ನಾಮ, ವಯಸ್ಸಿನ ಮಿತಿ ಎಂದು ವಿಂಗಡಿಸಿಕೊಳ್ಳಬೇಕಾಗುತ್ತದೆ. ಇಲ್ಲಿ ಉತ್ತರ ಪದಗಳಾದ ಶ್ರಮ, ಗಣ್ಯ, ನಾಮ, ಮಿತಿ ಎಂಬುದರ ಅರ್ಥ ಮುಖ್ಯವೆನಿಸುತ್ತದೆ. ಇಲ್ಲಿಯ ಪೂರ್ವ ಪದಗಳೆಲ್ಲವೂ ಹೆಚ್ಚಾಗಿ ಷಷ್ಠೀ ವಿಭಕ್ತಿಯನ್ನು ಹೊಂದಿದ್ದರೂ ಕೆಲವೆಡೆ ತೃತೀಯಾದಿ ವಿಭಕ್ತಿಗಳು ಬರುವುದೂ ಉಂಟು. ಇಂತಹುದನ್ನು **ತತ್ಪುರುಷ ಸಮಾಸ** ಎನ್ನುತ್ತಾರೆ.

ಉತ್ತರ ಪದದ ಅರ್ಥವು ಮುಖ್ಯವಾಗಿರುವ ಇನ್ನೂ ಎರಡು ಸಮಾಸಗಳಿವೆ.

ನಿಡುಗಾಲ, ನಿಟ್ಟೋಟ, ಕೆಂದಾವರೆ ಈ ಪದಗಳನ್ನು ಅರ್ಥಕ್ಕನುಸಾರವಾಗಿ ವಿಭಜಿಸಿದರೆ ನಿಡಿದು ಕಾಲ, ನಿಡಿದು ಓಟ, ಕೆಂಪು ತಾವರೆ ಎಂದಾಗುತ್ತದೆ. ಇಲ್ಲೂ ಉತ್ತರಪದದ ಅರ್ಥವೇ ಪ್ರಧಾನವಾದರೂ ಪೂರ್ವಪದಗಳೆಲ್ಲವೂ ವಿಶೇಷಣಗಳಾಗಿವೆ. ಹಾಗೂ ಉಭಯ ಪದಗಳೂ ಪ್ರಥಮಾ ವಿಭಕ್ತಿಯಲ್ಲಿದೆ. ಆದುದರಿಂದ ಇದು **ಕರ್ಮಧಾರಯ ಸಮಾಸ**ವೆಂದಾಗುತ್ತದೆ.

ಇದರಂತೆಯೇ ಒಕ್ಕೊರಲು, ಇತ್ತಂಡ ಎಂಬಿತ್ಯಾದಿ ಮೊದಲ ಪದ ಸಂಖ್ಯೆಯಾಗಿರುವ ಸಮಾಸ ಪದಗಳನ್ನೂ ಓದಿದ್ದೀರಿ. ಇದು ಕರ್ಮಧಾರಯದಂತೆಯೇ ಎರಡೂ ಪದಗಳು ಪ್ರಥಮಾ ವಿಭಕ್ತಿಯಿಂದ ಕೂಡಿದ್ದರೂ (ಒಂದು ಕೊರಲು, ಎರಡು ತಂಡ) ಪೂರ್ವ ಪದವು ಸಂಖ್ಯಾವಾಚಿಯಾಗಿದ್ದುದನ್ನು ಗಮನಿಸಿ. ಆದುದರಿಂದಲೇ ಇದು **ದ್ವಿಗುಸಮಾಸ.**



**ಗುರಿಯನ್ನು ಮುಟ್ಟುವುದಕ್ಕಿಂತ ಅದರೆಡೆಗೆ ನಂಬಿಕೆಯಿಂದ ಸಾಗುವುದೇ ಹೆಚ್ಚು ಆನಂದ ದಾಯಕ – ರಾಬರ್ಟ್ ಲೂಯಿಸ್ ಸ್ಟೀವನ್ಸನ್.**

ಮುಂಜೆರಗು, ಅಂಗಾಲು, ಮುಂಗೈ, ನಡುದಾರಿ, ಹಿಮ್ಮಡಿ ಎಂಬಿತ್ಯಾದಿ ಪದಗಳನ್ನು ಕೇಳಿದ್ದೀರಲ್ಲಾ. ಇಂತಹ ಸಮಾಸಪದಗಳನ್ನು ವಿಗ್ರಹವಾಕ್ಯಮಾಡುವಾಗ ಉತ್ತರಪದವು ಮುಂಚಿತವಾಗಿ ಬರುತ್ತದೆ. ಅಂದರೆ ಸೆರಗ ಮುಂದು, ಕಾಲ ಅಡಿ, ಕೈಯ ಮುಂದು, ದಾರಿಯ ನಡು, ಮಡಿಯ ಹಿಂದು ಎಂದಾಗುತ್ತದೆ. ಇಲ್ಲೆಲ್ಲಾ ಅಡಿ, ಹಿಂದು ಇತ್ಯಾದಿ 'ಅಂಶ'ಗಳು ಮುಖ್ಯವಾಗದೆ ಕಾಲು, ದಾರಿ, ಕೈ, ಇಂತಹ ವಿವಿಧ ಭಾಗಗಳುಳ್ಳ 'ಅಂಶಿ'ಯೇ ಪ್ರಧಾನವಾಗುತ್ತದೆ. ಹಾಗೂ ಸಮಾಸಪದದಲ್ಲೂ ಪೂರ್ವಪದದ ಅರ್ಥ ಪ್ರಧಾನವಾಗಿಯೇ ಇರುತ್ತದೆ. ಆದುದರಿಂದ ಮುಂದು, ಅಡಿ, ನಡು ಮೊದಲಾದ ಅವ್ಯಯಗಳು ಪೂರ್ವಪದವಾಗಿರುವುದರಿಂದ ಇವು **ಅವ್ಯಯೀಭಾವ ಸಮಾಸ**. ಅಂಶ ಮತ್ತು ಅಂಶಿಗಳಿಂದ ಕೂಡಿರುವ ಸಮಾಸವಾದುದರಿಂದ ಇದನ್ನು **ಅಂಶಿ ಸಮಾಸ** ಎಂದೂ ಕರೆಯುತ್ತಾರೆ.

ಇಲ್ಲಿಗೆ ಮೊದಲ ಪದದ ಅರ್ಥ ಮುಖ್ಯವಾದ ಹಾಗೂ ಎರಡನೆಯ ಪದದ ಅರ್ಥ ಮುಖ್ಯವಾಗಿರುವ ಸಮಾಸಗಳಾದವು. ಇನ್ನು ಪೂರ್ವೋತ್ತರ ಪದಗಳೆರಡರ ಅರ್ಥವೂ ಮುಖ್ಯವಾಗಿರುವ ಸಮಾಸವೊಂದಿದೆ. ಅದೇ **ದ್ವಂದ್ವ.** ರಾಮನೂ ಲಕ್ಷ್ಮಣನೂ – ರಾಮ ಲಕ್ಷ್ಮಣರು ಎಂದಾದಂತೆ, ಮರಗಿಡಬಳ್ಳಿ, ಹೂಕಾಯಿಹಣ್ಣುಗಳು. ಬಂದವರು ರಾಮಲಕ್ಷ್ಮಣರು ಎಂದಾಗ ಇಬ್ಬರೂ ಬಂದಿದ್ದಾರೆ ಎಂದರ್ಥ.

ಗಾಂಡೀವಿ, ಚಕ್ರಿ, ವನಜಮುಖಿ, ಉರಗಪತಾಕ ಇತ್ಯಾದಿ ಪದಗಳನ್ನು ನೀವು ಕೇಳಿದ್ದೀರಿ. ಇವುಗಳಿಗೆ ಕ್ರಮವಾಗಿ ಅರ್ಜುನ, ಕೃಷ್ಣ, ಯಾವುದೇ ಚೆಂದದ ಹೆಣ್ಣು, ದುರ್ಯೋಧನ ಎಂಬ ಅರ್ಥವಿದೆ. ಆದರೆ ಸಮಾಸ ಪದದಲ್ಲಿ ಆ ಅರ್ಥ ನೀಡುವ ಪದವೇ ಇಲ್ಲ. ಗಾಂಡೀವ ಎಂಬುದು ಒಂದು ಬಿಲ್ಲಿನ ಹೆಸರು. ಅದನ್ನು ಧರಿಸಿದವನು ಯಾವನೋ ಅವನು ಗಾಂಡೀವಿ ಎಂದಾಗುತ್ತದೆ. ಗಾಂಡೀವ ಧನುಸ್ಸನ್ನು ಹಿಡಿದಾತನೇ ಗಾಂಡೀವಿ. ಅಂದರೆ ಅರ್ಜುನ; ಹೀಗೆಯೇ ಉಳಿದ ಪದಗಳಿಗೂ ಅರ್ಥವನ್ನು ಕಲ್ಪಿಸಿಕೊಳ್ಳಬೇಕು. ಅಂದರೆ ಸಮಾಸ ಪದದಲ್ಲಿಯ ಅರ್ಥ ಮುಖ್ಯವಾಗದೆ ಬೇರೊಂದು ಅರ್ಥ ಪ್ರಧಾನವಾಗಿರುವುದೇ **ಬಹುವ್ರೀಹಿ ಸಮಾಸ.** ಇವು ಸಂಸ್ಕೃತದ ಸಮಾಸಗಳು.



ಕನ್ನಡದಲ್ಲಿ ಕ್ರಿಯಾಸಮಾಸವೆಂಬುದಿದೆ

ನೀರನ್ನು ಎರೆ – ನೀರೆರೆ, ಮರವನ್ನು ಏರು – ಮರವೇರು, ಚಪ್ಪಾಳೆಯನ್ನು ತಟ್ಟು – ಚಪ್ಪಾಳೆತಟ್ಟು. ಈ ಪದಗಳನ್ನು ಗಮನಿಸಿ. ಮೊದಲಪದ ನಾಮಪದ. ಅದಕ್ಕೆ ದ್ವಿತೀಯ ವಿಭಕ್ತಿ ಸೇರಿದೆ. ಮುಂದಿನದು ಕ್ರಿಯಾಪದವಾಗಿದೆ. ಹೀಗೆ ಪೂರ್ವ ಪದವು ಕರ್ಮಕಾರಕದ ನಾಮಪದವಾಗಿ ಉತ್ತರಪದವು ಕ್ರಿಯಾವಾಚಿಯಾಗಿದ್ದಾಗ **ಕ್ರಿಯಾ ಸಮಾಸ**ವಾಗುತ್ತದೆ.

ಮೇಲಿನ ನಿಯಮಗಳ ಆಧಾರದ ಮೇಲೆ ಈ ಕೆಳಗಿನ ಸಮಾಸಗಳನ್ನು ವಿಗ್ರಹಿಸಿ ಸಮಾಸದ ಹೆಸರನ್ನು ಪರಿಚಯಿಸಿಕೊಳ್ಳಿರಿ.

ಜನಮಾನಸ, ಗುರೂಪದೇಶ, ಹೆಬ್ಬಾವು, ಕಾವುಪಡೆ, ನಿಟ್ಟುಸಿರು, ಇಕ್ಕಟ್ಟು, ಒಮ್ಮನ.

**ಪ್ರಪಂಚದ ವ್ಯಾಮೋಹ ತಗ್ಗಿದಷ್ಟು ಮನಸ್ಸಿನಲ್ಲಿ ಶಾಂತಿ ಬೆಳೆಯುತ್ತದೆ – ಮಾತೆ ಶ್ರೀ ಶಾರದಾ ದೇವಿ.**

**ನಾಮಪದಗಳು :**

ಕನ್ನಡದಲ್ಲಿ ನಾಮಪದ, ಕ್ರಿಯಾಪದ, ಅವ್ಯಯಗಳೆಂದು ಮೂರು ರೀತಿಯ ಪದಗಳಿವೆ.

ಬೇಗಬೇಗನೆ, ದೊಪ್ಪನೆ, ಅಂತೆ ಎಂಬಿತ್ಯಾದಿ ಪದಗಳು ಎಲ್ಲಾ ಲಿಂಗಗಳಲ್ಲಿ, ಮೂರೂ ಕಾಲಗಳಲ್ಲಿ, ವಚನಗಳೆರಡರಲ್ಲಿ ಏನೊಂದೂ ಬದಲಾವಣೆಗಳಿಲ್ಲದೆ ಯಥಾವತ್ತಾಗಿ ಪ್ರಯೋಗಗೊಳ್ಳುತ್ತಿದೆ. ಆದ್ದರಿಂದ ವ್ಯಯಹೊಂದದ ಇಂತಹ ಪದಗಳು **'ಅವ್ಯಯ'**.

ಕ್ರಿಯೆಯನ್ನು ಹೇಳುವ ಶಬ್ದಗಳು **ಧಾತು** ಅಥವಾ **ಕ್ರಿಯಾಪ್ರಕೃತಿ**.
ಇವೆರಡನ್ನು ಬಿಟ್ಟು ಉಳಿದವುಗಳೆಲ್ಲವೂ **ನಾಮಪ್ರಕೃತಿ**.
ಪ್ರಕೃತಿಗೆ ಪ್ರತ್ಯಯ ಸೇರಿದಾಗ ಪದವಾಗುತ್ತದೆ. ನಾಮಪ್ರಕೃತಿ+ವಿಭಕ್ತಿ ಪ್ರತ್ಯಯ=**ನಾಮಪದ**.

**ನಾಮಪದಗಳು :** ನಾಮಪದಗಳನ್ನು ವಸ್ತುವಾಚಕ, ಗುಣವಾಚಕ, ಸಂಖ್ಯಾವಾಚಕ, ಭಾವನಾಮ, ಪರಿಮಾಣವಾಚಕ, ದಿಗ್ವಾಚಕ, ಸರ್ವನಾಮ ಎಂಬುದಾಗಿ ವಿಂಗಡಿಸಬಹುದು.

ವಸ್ತುವಾಚಕಗಳಲ್ಲಿ ರೂಢ, ಅಂಕಿತ, ಅನ್ವರ್ಥ – ಈ ನಾಮಪದಗಳನ್ನು ಈಗಾಗಲೇ ನೀವು ಕಲಿತಿದ್ದೀರಿ.

## ಗುಣವಾಚಕ, ಸಂಖ್ಯಾವಾಚಕ, ದಿಗ್ವಾಚಕ, ಸರ್ವನಾಮ

ರೂಢಿಯಲ್ಲಿ ಹಿಂದಿನಿಂದಲೂ ಬಂದಿರುವ ಪದಗಳು ರೂಢನಾಮ, ಗುಣಕ್ಕೂ ಅರ್ಥಕ್ಕೂ ಅನುರೂಪವಾಗಿರುವ, ಅಂದರೆ ಅರ್ಥಾನುಸಾರವಾಗಿ ಬಂದಿರುವ ಪದಗಳು ಅನ್ವರ್ಥನಾಮ, ಗುರುತಿನ ಹೆಸರನ್ನು ನೀಡುವಲ್ಲಿಯ ಪದಗಳು ಅಂಕಿತನಾಮಗಳೆಂದು ತಿಳಿದಿದ್ದೀರಿ. ಇವೆಲ್ಲ ವಸ್ತು ವಾಚಕಗಳು.

**ಗುಣವಾಚಕ** : ಮೇಲಿನ ನಾಮಪದಗಳಿಗೆ ವಿಶೇಷಣವಾಗಿ ಬರುವ ಕೆಲವು ಪದಗಳಿವೆ. ಅವು ವಸ್ತುಗಳ ಗುಣ, ಬಣ್ಣ, ಸ್ವಭಾವ ಇತ್ಯಾದಿಗಳನ್ನು ತಿಳಿಸಿಕೊಡುತ್ತವೆ. ಕನ್ನಡದಲ್ಲಿಯ ಒಳ್ಳೆಯ, ಮೆಲ್ಲನೆ, ತೆಳ್ಳನೆ, ತಣ್ಣನೆ, ಕಡಿಮೆ, ನಿಡಿದು, ತೋರ, ಮೊದಲಾದವು ವಿಶೇಷಣನಾಮ ಅಥವಾ ಗುಣವಾಚಕಗಳು. ನಾಮಪದಗಳಿಗೆ ವಿಶೇಷಣವಾಗಿ ಬರುವ ಈ ಪದಗಳಿಂದ ಅರ್ಥಕ್ಕೊಂದು ಗಾಂಭೀರ್ಯವೂ ಒದಗುತ್ತದೆ.

**ಸಂಖ್ಯಾವಾಚಕ** : ಒಂದರಿಂದ ಆರಂಭಗೊಂಡ ಅಸಂಖ್ಯಾತ ಸಂಖ್ಯೆಗಳಿವೆ. ಅವುಗಳನ್ನು ಬಳಸುವಲ್ಲಿ ನಾವು ಜಾಗ್ರತರಾಗಬೇಕು. '1 ತರಗತಿ' ಇದು ಅಶುದ್ಧ ರೂಪ. ಅದು ಒಂದನೆಯ ತರಗತಿ ಎಂದಾದರೆ ಶುದ್ಧರೂಪ. ಆದರೆ 'ತರಗತಿ 10' ಸರಿರೂಪ. ಸಂಖ್ಯಾವಾಚಕಗಳಿಗೆ ಅನೆಯ (ನೇ ತಪ್ಪುರೂಪ) ಪ್ರತ್ಯಯ ಸೇರಿ ಬರೆಹದಲ್ಲಿ ಸ್ಥಾನಪಡೆಯುತ್ತದೆ. ಉದಾ: ಒಂಬತ್ತನೆಯ ತರಗತಿ, ನಾಲ್ಕನೆಯ ಬೀದಿ. 8ನೇಎಂಬುದು ಅಪಪ್ರಯೋಗ. ಸಂಖ್ಯೆಗೆ 'ನೇ' ಸೇರಿಸಬಾರದು. 8 ಇದು ಒಂದು ಸಂಖ್ಯೆ ಮಾತ್ರ. ಆದರೆ ಎಂಟು ಎಂಬುದು ಅಕ್ಷರದಲ್ಲಿ ಬರೆದರೆ ಅದು ಸಂಖ್ಯಾವಾಚಕ. ಇದಕ್ಕೆ ಅನೆಯ ಪ್ರತ್ಯಯ ಸೇರಿ ಎಂಟನೆಯ ಎಂದಾಗುತ್ತದೆ.

**ಆಡಂಬರವಿಲ್ಲದ ಸರಳ ಜೀವನ ನಡೆಸುವುದೇ ಉತ್ಕೃಷ್ಟವಾದುದು – ಕೃಷ್ಣಾನಂದ ವಾರಿಯರ್.**

**ದಿಗ್ವಾಚಕ** : ಸಂಸ್ಕೃತ ದಿಕ್‌ವಾಚಕಗಳಿಗೆ ಸಮವಾದ ಪದಗಳು ಕನ್ನಡದಲ್ಲೂ ಇದೆ. ಮೂಡು, ಪಡು, ಬಡಗು, ತೆಂಕು, ಮೇಲೆ–ಕೆಳಗೆ, ಒಳಗೆ–ಹೊರಗೆ ಇತ್ಯಾದಿ ಪದಗಳು ಮೂಲ ರೂಪದಲ್ಲಿಯೇ ವಾಕ್ಯದಲ್ಲಿ ಸ್ಥಾನವನ್ನು ಪಡೆಯವು. ಅವುಗಳಿಗೆ 'ಅಣ' ಪ್ರತ್ಯಯವನ್ನು ಸೇರಿಸಿದಾಗ 'ಪದ'ವೆನಿಸಿಕೊಂಡು 'ಬರೆಹ'ಕ್ಕೆ ಬರುತ್ತವೆ.

**ಉದಾ :** ಮೂಡಣದಿ ಮುಗಿಲೆದ್ದು, ಪಡುವಣ ಗಾಳಿ, ಮರದ ಮೇಲಣ, ಮಠದೊಳಗಣ ಬೆಕ್ಕು ಇತ್ಯಾದಿ. ಆದುದರಿಂದ ಕನ್ನಡದ ದಿಕ್ಕು ಸೂಚಕ ಪದಗಳಿಗೆ 'ಅಣ' ಪ್ರತ್ಯಯವನ್ನು ಸೇರಿಸಿಯೇ ಬರೆಯಬೇಕು.

**ಸರ್ವನಾಮ** : ಮೇಲಿನ ನಾಮಪದಗಳನ್ನು ಮೇಲಿನಿಂದ ಮೇಲೆ ಪ್ರತಿವಾಕ್ಯದಲ್ಲಿ ಸೇರಿಸಿದರೆ ಕೇಳಲು ಹಿತವಾಗುವುದಿಲ್ಲ. ಪ್ರತಿವಾಕ್ಯದಲ್ಲಿ ಮತ್ತೆ ಮತ್ತೆ ಬರುವ ಪ್ರಸನ್ನ, ವಸಂತ, ಮಾವಿನ ಮರ ಇತ್ಯಾದಿ ಕಡೆಗಳಲ್ಲಿ ಅವನು, ಅದು, ಅವರು ಇತ್ಯಾದಿ ಪದಗಳನ್ನು ಸೇರಿಸುವುದರಿಂದ ಧ್ವನಿವ್ಯತ್ಯಾಸ ಉಂಟಾಗಿ ಏಕತಾನದ ಬೇಸರ ಆಗದು. ಈತನು, ಅವನು ಎಂಬುದು ಪ್ರಸನ್ನ, ಅಂತೋನಿ, ರಾಮ ಇತ್ಯಾದಿ ಯಾವುದೇ ಪುಲ್ಲಿಂಗಕ್ಕೆ ತಕ್ಕುದಾಗಿರುತ್ತದೆ. ಹಾಗೆಯೇ ಇವಳು ಅವಳು ಎಂಬುದು ಎಲ್ಲಾ ಸ್ತ್ರೀಲಿಂಗದ ಪದಗಳಿಗೆ, ನಪುಂಸಕವಾಚಿಗೆ ಅದು ಇದು ಎಂಬ ಪದವು ಸಾಮಾನ್ಯವಾಗಿ ಬಳಕೆಯಾಗುತ್ತದೆ. ಹೀಗೆ ಎಲ್ಲಾ ಕಡೆಯಲ್ಲೂ ಏಕರೂಪದಲ್ಲಿ ಬಳಕೆಯಾಗುವ ಪದಗಳೆ ಸರ್ವನಾಮಗಳು. ಇಂತಹ ಬೇರೆ ಸರ್ವನಾಮಪದಗಳನ್ನು ತಿಳಿದುಕೊಳ್ಳಿ. ಮೂರು ಪುರುಷಗಳಲ್ಲಿ (ಅವನು, ನೀನು, ನಾನು) ಬಳಕೆಯಾಗುವಂತಹವುಗಳಿಗೆ ಪುರುಷಾರ್ಥಕ ಸರ್ವನಾಮಗಳೆನ್ನುತ್ತಾರೆ. ಏನು, ಏಕೆ, ಯಾರು ಇತ್ಯಾದಿ ಪ್ರಶ್ನೆ ರೂಪದಲ್ಲಿರುವಂತಹುದು ಪ್ರಶ್ನಾರ್ಥಕ ಸರ್ವನಾಮ.





**ಕರುಣೆ ಮತ್ತು ಪಶ್ಚಾತ್ತಾಪವಿಲ್ಲದವನು ಮಾನವನಲ್ಲ – ಮಾತೆ ಶ್ರೀ ಶಾರದಾದೇವಿ.**

## ಗದ್ಯಪಾಠ – ೫

# ಪಶ್ಚಿಮ ಘಟ್ಟಗಳ ಪತನ

*ನಾಗೇಶ ಹೆಗಡೆ*

**ಪಾಠಪ್ರವೇಶ:** ಪರಿಸರಕ್ಕೂ ಇಲ್ಲಿರುವ ಜೀವಿಗಳಿಗೂ ಬಿಡಿಸಲಾರದ ಬಂಧವಿದೆ, ಹೊಂದಾಣಿಕೆಯಿದೆ. ಇದರಲ್ಲಿ ಸ್ವಲ್ಪ ವ್ಯತ್ಯಯವಾದರೂ ಅದು ಇನ್ನೊಂದರ ಮೇಲೆ ಪರಿಣಾಮ ಬೀರುತ್ತದೆ. ಕಾಡು ವಿರಳವಾದಾಗ ಅರಣ್ಯದ ಜೀವಿಗಳು ನಾಡಿಗೆ ನುಗ್ಗುತ್ತವೆ. ಮನುಷ್ಯನ ಸಂಖ್ಯೆ ಲೆಕ್ಕಮೀರಿದಾಗ ಕಾಡುನಾಶವಾಗುತ್ತದೆ. ಆದುದರಿಂದ ಇವುಗಳ ಸಮತೋಲನವನ್ನು ಕಾಯ್ದುಕೊಳ್ಳುವುದರಲ್ಲಿ ಮಾನವನ ಹಿತವಿದೆ. ಅದರೆ ಅಭಿವೃದ್ಧಿಯ ಹೆಸರಿನಲ್ಲಿ ಮಾನವನಿಂದ ಪ್ರಕೃತಿಯಮೇಲೆ ನಿರಂತರವಾಗಿ ಹಲ್ಲೆ ನಡೆಯುತ್ತಲೇ ಇದೆ. ದಕ್ಷಿಣ ಭಾರತದ ನೈಸರ್ಗಿಕ ಖಜಾನೆಯಾಗಿರುವ ಸಹ್ಯಾದ್ರಿಯ ಸಾಲು ಮಾನವನ ದಾಳಿಗೆ ತುತ್ತಾಗಿ ಸಹನೆ ಕಳೆದುಕೊಳ್ಳುತ್ತಿದೆ. ಇಲ್ಲಿ ಏನೇನಿದೆ ಎಂದು ನೋಡುವ ಮೊದಲೇ ಸಮಸ್ತ ಜೀವಭಂಡಾರ ಕಣ್ಮರೆಯಾಗುವುದರಲ್ಲಿದೆ. ಹಾಗಾಗದಂತೆ ಪ್ರಕೃತಿಯನ್ನು ರಕ್ಷಿಸಿ ನಮ್ಮ ಸುತ್ತಮುತ್ತಣ ಪ್ರದೇಶವನ್ನು ಹಸಿರುವಲಯವನ್ನಾಗಿಸಲು ನಾವು ಕೈ ಜೋಡಿಸಬೇಕಾದುದು ಅಗತ್ಯ. ಅಷ್ಟೇ ಅಲ್ಲ, ಅದರ ನಿರಂತರ ಅರಿವು ಎಲ್ಲರಲ್ಲೂ ಜಾಗೃತವಾಗಿರಬೇಕಾದುದು ಅತ್ಯಗತ್ಯ.

ಕನ್ನಡ ನಾಡಿನ ಯಾವ ಮೂಲೆಯಲ್ಲಿದ್ದರೂ ನೀವು ಪಶ್ಚಿಮ ಘಟ್ಟಗಳ ಪ್ರಭಾವದಿಂದ ದೂರವಿರಲಾರಿರಿ.

ಉದಾಹರಣೆಗೆ, ವಿದ್ಯುತ್‌ದೀಪದ ಬೆಳಕಿನಲ್ಲಿ ನೀವು ಈ ಲೇಖನ ಓದುತ್ತಿದ್ದರೆ, ಪಶ್ಚಿಮ ಘಟ್ಟಗಳಿಂದ ಹರಿದು ಬಂದ ನದಿಯೇ ನೀವಿದ್ದಲ್ಲಿ ಬೆಳಕು ಹರಿಸುತ್ತದೆ. ಹೊರಗೆ ಸುರಿಯುವ ಜಡಿ ಮಳೆ, ತೇವ ತುಂಬಿದ ಗಾಳಿಗೆ ಆ ಘಟ್ಟ ಸಾಲುಗಳೇ ಕಾರಣ. ಇದೀಗತಾನೆ ತಂದಿಟ್ಟ ಬಿಸಿ ಕಾಫಿ ಹೀರುತ್ತಿದ್ದೀರೋ, ಪ್ರಾಯಶಃ ಕಾಫಿ ಮಾಡಲು ಪಶ್ಚಿಮ ಘಟ್ಟದ್ದೇ ಕಾಫಿಪುಡಿಯನ್ನು ಬಳಸಿರಬಹುದು. ಅದನ್ನು ತುಂಬಿ ತಂದ ಸ್ಟೀಲ್ ಲೋಟಕ್ಕೂ ಪಶ್ಚಿಮ ಘಟ್ಟಗಳ ಖನಿಜವನ್ನೇ ಉಪಯೋಗಿಸಿರಬಹುದು. ಕಾಫಿ ಕುಡಿದು ಲವಂಗ, ಏಲಕ್ಕಿಮಿಶ್ರಿತ ಸುವಾಸನೆ ಅಡಿಕೆಪುಡಿ ಬಾಯಿಗೆ ಹಾಕಿಕೊಂಡರೆ ಮತ್ತೆ ಆ ಘಟ್ಟಗಳ ನೆನಪಾಗಬೇಕು.

ಇದೊಂದೂ ಪರಿಕರವಿಲ್ಲದೆ ಖಾಲಿ ಬೆತ್ತದ ಕುರ್ಚಿಯ ಮೇಲೆ ಕೂತು ಈ ಲೇಖನ ಓದಲು ಪ್ರಾರಂಭಿಸಿದರೋ, ಕೂತ ಕುರ್ಚಿಯ ಬೆತ್ತವನ್ನೇ ಒಮ್ಮೆ ಸವರಿ ನೋಡಿ, ಸಾಕು. ಅದೂ ಬೇಡವೆಂದರೆ ಬಿದಿರಿನಿಂದ ತಯಾರಿಸಿದ ಈ ಕಾಗದವನ್ನೇ ನೋಡಿ. ಪಶ್ಚಿಮ ಘಟ್ಟಗಳ ಹತ್ತು ಹಲವು ಕತೆಗಳು ಇದರಲ್ಲಿ ಹುದುಗಿವೆ.

ಇನ್ನೊಂದು ವಿಧಾನದಲ್ಲೂ ನೀವು ಆಗಾಗ ಘಟ್ಟಗಳನ್ನು ಸ್ಮರಿಸಿಕೊಳ್ಳಬಹುದು. ಇದ್ದಕ್ಕಿದ್ದಂತೆಯೇ ವಿದ್ಯುತ್ ಕಡಿತವುಂಟಾಗಿ ಓದು ಭಂಗವಾದರೆ ಅದು ಆ ಘಟ್ಟಗಳನ್ನು ಅತಿಯಾಗಿ ದೋಚಿದ್ದುದರ ಪರಿಣಾಮವಿರಬಹುದು. ಹವಾಮಾನದ ಏರುಪೇರು, ಅತಿವೃಷ್ಟಿ, ಭೂಕುಸಿತ, ಪ್ರವಾಹಪೀಡೆ, ಕುಡಿಯುವ ನೀರಿನ ಅಭಾವ, ಸಾಂಕ್ರಾಮಿಕ ರೋಗ ಈ ಎಲ್ಲಾ ಅಧ್ವಾನಗಳಿಗೆ ನೀವು ಸುತ್ತುಬಳಸಿಯಾದರೂ ಸಹ್ಯಾದ್ರಿ ಪರ್ವತ ಶ್ರೇಣಿಯ ಸಂಬಂಧ ಕಲ್ಪಿಸಿಕೊಳ್ಳಬಹುದು.

**ಸತ್ಯದ ಹಾದಿಯಲ್ಲಿ ನಿಲ್ಲುವವನು ಎಲ್ಲ ಕಾಲದಲ್ಲಿಯೂ ಅಳಿಸಲಾಗದ ಕೀರ್ತಿಯನ್ನು ಪಡೆಯುತ್ತಾನೆ–ಸ್ವಾಮಿ ವಿವೇಕಾನಂದ.**

ಮೇಲೆ ಆಕಾಶಕ್ಕೆ ಮುಖಮಾಡಿ ಬೆಳೆದ ಸದಾ ಹಸಿರಿನ ದಟ್ಟ ಕಾಡು, ಸೂರ್ಯನ ಸೆಕೆತಾಗದ ಕಾಲಡಿಯಲ್ಲಿ ಕತ್ತಲು ಕವಿದಿರುವ ಗೊಂಡಾರಣ್ಯ, ಜೇನು, ಜೀರುಂಡೆ, ಕೀಟ, ಪತಂಗಗಳಿಂದ ಹಿಡಿದು, ಕಾಡೆಮ್ಮೆ ಮದ್ದಾನೆಗಳವರೆಗೂ ಅಸಂಖ್ಯ ಜೀವಕೋಟಿಗಳ ಆಶ್ರಯತಾಣ. ಧುಮ್ಮಿಕ್ಕುವ ಜಲಪಾತ, ಬಿಸಿ ನೀರಿನ ಬುಗ್ಗೆ, ಹಿಮಶೀತಲ ಸರೋವರ, ಸೂಜಿಮೊನೆಯಂಥ ಶಿಖರ, ದುರ್ಗಮ ಪ್ರಪಾತವೇ ಮುಂತಾದ ಉಬ್ಬುತಗ್ಗಿನ ವೈಚಿತ್ರ್ಯಗಳ ಗುಡಾಣ.

ಕೆಳಗೆ, ನೆಲದೊಳಗೆ ಖಜಾನೆ. ತಾಮ್ರ, ನಿಕ್ಕಲ್, ಮ್ಯಾಂಗನೀಸ್, ಕಬ್ಬಿಣ, ಬಾಕ್ಸಾಯಿಟ್, ಯುರೇನಿಯಂ, ಗ್ರಾಫಾಯಿಟ್, ಕ್ರೋಮಾಯಿಟ್ ಖನಿಜಗಳ ಶೇಖರಣೆ. ನೀರಿನಲ್ಲಿ ತೇಲಬಲ್ಲ ಲಾವಾ ಬಂಡೆಗಳು, ಬಿಲ್ಲಿನಂತೆ ಬಾಗಬಲ್ಲ ಮರಳು ಕಲ್ಲುಗಳು, ವಜ್ರದಂತೆ ಮಿರುಗುವ ಅಮೆಥಿಸ್ಟ್ ಹರಳುಗಳು, ಮೇಣದಂತೆ ಕರಗುವ ಝಿಯೋಲೈಟ್ ಖನಿಜಗಳ ನಿಸರ್ಗನಿರ್ಮಿತ ಸಂಗ್ರಹಾಲಯ.

ಪಶ್ಚಿಮ ಘಟ್ಟಗಳ ನಿಜವಾದ ಪತನ ಪ್ರಾರಂಭವಾದದ್ದು ಸ್ವಾತಂತ್ರ್ಯ ಬಂದ ಮೇಲೆ. ಒಂದು ಕಡೆ ಏರುತ್ತಿರುವ ಜನಸಂಖ್ಯೆಯಿಂದಾಗಿ ಕೃಷಿ ಭೂಮಿಯ ವಿಸ್ತರಣೆಗೆಂದು ರೈತರು ಅರಣ್ಯ ಕಡಿದು ಅತಿಕ್ರಮ ಸಾಗುವಳಿ ಆರಂಭಿಸಿದ್ದು. ಇನ್ನೊಂದು ಕಡೆ, ಅರಣ್ಯಹುಟ್ಟುವಳಿಗಳಾದ ಮೆಣಸು, ದಾಲಚಿನ್ನಿ, ಜೇನು, ಧೂಪ, ದಂತ, ರಾಳ, ಬಗಿನೆ, ಬಿದಿರುಗಳಿಗೆ ಬೇಡಿಕೆ ಹೆಚ್ಚಾದ್ದರಿಂದ ಹಣದಾಸೆಗೆ ಕಾಡು ದೋಚುವವರ ಸಂಖ್ಯೆ ಹೆಚ್ಚಾದದ್ದು. ಇವೆಲ್ಲಕ್ಕಿಂತ ಹೆಚ್ಚಾಗಿ ದೇಶದ ಅಭಿವೃದ್ಧಿಗೆಂದು ಉದ್ದಿಮೆಗಳನ್ನು ಸ್ಥಾಪಿಸಿ ಖನಿಜ, ವಿದ್ಯುತ್ತಿಗೆಂದು ಸರಕಾರವೇ ಪಶ್ಚಿಮ ಘಟ್ಟಕ್ಕೆ ಲಗ್ಗೆ ಹಾಕಿದ್ದು. ಕಾಪಾಡಬೇಕಿದ್ದ ಮಾಲೀಕನೇ ತನ್ನ ನೂರು ತೋಳುಗಳಿಂದ ಕಾಡಿಗೆ ಕೊಡಲಿ ಬೀಸಿದ್ದು. ತಾನು ದೋಚುವುದಷ್ಟೇ ಅಲ್ಲದೆ, ದೋಚಲು ಸಿದ್ಧರಾದ ಖಾಸಗಿ ಉದ್ದಿಮೆದಾರರನ್ನಲ್ಲಿಗೆ ಕರೆದು ಕೊಡಲಿ, ಗುದ್ದಲಿ, ಸಿಡಿಮದ್ದು ನೀಡಿದ್ದು.

ಈ ಕೊಡಲಿ, ಗುದ್ದಲಿ, ಸಿಡಿಮದ್ದುಗಳಿಂದ ಪಶ್ಚಿಮಘಟ್ಟಗಳು ತತ್ತರಿಸುತ್ತಿವೆ. ನೋಡನೋಡುತ್ತ ನಿರ್ನಾಮವಾಗುತ್ತಿವೆ.

ಸಹ್ಯಾದ್ರಿ ಸಹನೆ ಕಳೆದುಕೊಳ್ಳುತ್ತಿದೆ. ಸಹಸ್ರಾರು ವರುಷಗಳಿಂದ ವಿವಿಧ ಬಗೆಯ ಜೀವಕೋಟಿಗಳಿಗೆ ಆಶ್ರಯ ನೀಡಿದ ಈ ಸಹ್ಯಪರ್ವತವು ಈಗ ಅಸಹ್ಯ ಪರ್ವತವಾಗುತ್ತಿದೆ.

ಅರಣ್ಯಗಳ ಎಡೆಬಿಡದ ಬಳಕೆಯಿಂದಾಗಿ ಭೂಮಿಯ ಮೇಲಿನ ಮಣ್ಣಿನ ಕವಚ ತೊಳೆದುಹೋಗುತ್ತಿದೆ. ಕೆರೆ, ಸರೋವರ, ನದಿ, ಒಡ್ಡು, ಅಣೆಕಟ್ಟುಗಳಲ್ಲಿ ಶೀಘ್ರಗತಿಯಲ್ಲಿ ಹೂಳು ತುಂಬಿ, ನೀರಿನ ನಿಕ್ಷೇಪ ಖಾಲಿಯಾಗುತ್ತಿದೆ.

ಮಳೆಯ ರಭಸವನ್ನು ತಡೆದು ನೀರನ್ನು ನಿಧಾನವಾಗಿ ಭೂಮಿಯೊಳಕ್ಕೆ ಇಂಗಿಸಬೇಕಿದ್ದ ಮರಗಳು ಕಡಮೆಯಾದುದರಿಂದ ಪ್ರವಾಹದ ಹಾವಳಿ ಹೆಚ್ಚುತ್ತಿದೆ. ಭೂಕುಸಿತ ಅತಿಯಾಗುತ್ತಿದೆ. ಅಂತರ್ಜಲ ಕಡಿಮೆಯಾಗಿ ಬೇಸಗೆಯಲ್ಲಿ ನದಿಗಳು ಬತ್ತತೊಡಗಿವೆ. ವನ್ಯಮೃಗಗಳಿಗೆ ಆಶ್ರಯ ತಪ್ಪಿಹೋಗಿ ಹೊಲ ಗದ್ದೆಗಳಿಗೆ ದಾಳಿ ಆರಂಭಿಸಿವೆ. ಎಲ್ಲೋ ಮೂಲೆಯಲ್ಲಿ ಹುಟ್ಟಿ ಯಾರಿಗೂ ಗೊತ್ತಿಲ್ಲದಂತೆ ಎಲೆಮರೆಯಲ್ಲಿ ಮುದುರಿಕೊಂಡಿದ್ದ ಕ್ಯಾಸನೂರು ರೋಗಾಣುಗಳು ಕಾಡುಬಿಟ್ಟು ನಾಡಿಗೆ ಹಬ್ಬುತ್ತಿವೆ. ಏಕಜಾತಿ ಸಸ್ಯಗಳಿಂದಾಗಿ ಕೀಟಗಳ ಹಾವಳಿ, ರೋಗಗಳ ಹಾವಳಿ ಹೆಚ್ಚುತ್ತಿವೆ. ಇಂಥ ಕಾಡುಗಳಲ್ಲಿ ಮೇಯಲು ಹೋದ ಗರ್ಭಿಣಿ ಜಾನುವಾರುಗಳ ಗರ್ಭಪಾತವಾಗುವುದು ಹೆಚ್ಚುತ್ತಿದೆ.

**ಜ್ಞಾನ ಆಗಮಿಸುವಾಗ ಅಹಂಕಾರ ದೂರ ಸರಿಯುತ್ತದೆ – ಶ್ರೀ ರಾಮಕೃಷ್ಣ ಪರಮಹಂಸ.**

ಪೆಟ್ಟುತಿಂದ ಪ್ರಕೃತಿ ಮೊದಮೊದಲು ಮೆಲ್ಲಗೆ ಪ್ರತಿಭಟಿಸಿತು. ಯಾರೂ ಪ್ರತಿಭಟನೆಯನ್ನು ಲಕ್ಷ್ಯಕ್ಕೆ ತಾರದೆ ಅರಣ್ಯಗಳ ಸೂರೆಯನ್ನು ಮುಂದುವರಿಸಿದಾಗ ಪ್ರಕೋಪ ಹೆಚ್ಚಾಯಿತು. ಘಾಸಿಗೊಂಡ ಪಶ್ಚಿಮ ಘಟ್ಟಗಳ ಕೋಪತಾಪದ ಪ್ರಭಾವ, ಕಾಡು, ಗುಡ್ಡಗಾಡುಗಳ ಪರಿಮಿತಿಯನ್ನೂ ಮೀರಿ ಬಯಲಿಗೆ ಬಂತು; ಕರಾವಳಿಗೆ ಬಂತು. ಇಡೀ ದಕ್ಷಿಣ ಭಾರತದ ಹವಾಮಾನದ ಏರುಪೇರುಗಳಿಗೆ, ಅತಿವೃಷ್ಟಿ, ಅನಾವೃಷ್ಟಿ, ಚಂಡಮಾರುತಗಳಿಗೆಲ್ಲ ಪಶ್ಚಿಮ ಘಟ್ಟವೇ ಕಾರಣವೆಂದು ಕೆಲವರಾದರೂ ಊಹಿಸುವ ಮಟ್ಟಕ್ಕೆ ಸಮಸ್ಯೆ ಬಿಗಡಾಯಿಸಲಾರಂಭಿಸಿತು.



ಸಾವಿರಾರು ಬುಲ್‌ಡೋಜರ್‌ಗಳೂ, ಲಕ್ಷಾಂತರ ಲಾರಿಗಳೂ, ಕೋಟ್ಯಂತರ ಕಾಲಾಳುಗಳೂ ಲಗ್ಗೆ ಹಾಕಿರುವಾಗ, ಕೇವಲ ಬೆರಳೆಣಿಕೆಯಷ್ಟು ಮಂದಿ ಪಶ್ಚಿಮದ ಈ ಗೋಡೆಯನ್ನು ರಕ್ಷಿಸಹೊರಟರೆ ಏನೇನೂ ಸಾಲದು. ನಿಸರ್ಗದ ಈ ಖಜಾನೆಯಲ್ಲಿ ಏನೇನಿದೆಯೆಂದು ನೋಡುವ ಮೊದಲೇ ಸ್ವಾಹಾಕಾರದ ಹಾದಿಯಲ್ಲಿ ನಾವೆಲ್ಲ ಮುಂದೆ ನುಗ್ಗುತ್ತಿದ್ದರೆ, ನಮ್ಮ ಮುಂದಿನ ಪೀಳಿಗೆಯವರು ಮರುಭೂಮಿಯನ್ನು ನೋಡಲು ದೂರದ ರಾಜಸ್ಥಾನಕ್ಕೆ ಹೋಗಬೇಕಾಗಲಿಕ್ಕಿಲ್ಲ.



## ಲೇಖಕರ ಪರಿಚಯ



ನಾಗೇಶ ಹೆಗಡೆಯವರ ಹುಟ್ಟೂರು ಉತ್ತರ ಕನ್ನಡ ಜಿಲ್ಲೆಯ ಬಕ್ಕಮನೆ. ವಿದ್ಯಾರ್ಹತೆ : ಭೂ ವಿಜ್ಞಾನದಲ್ಲಿ ಎಂ.ಎಸ್‌ಸಿ, ಪರಿಸರ ವಿಜ್ಞಾನದಲ್ಲಿ ಎಂ.ಫಿಲ್. ಉದ್ಯೋಗ : ನೈನಿತಾಲಿನ ಕುಮಾವೊ ವಿ.ವಿ.ಯಲ್ಲಿ ಉಪನ್ಯಾಸಕ. ಕೃತಿಗಳು: ಇರುವುದೊಂದೇ ಭೂಮಿ, ಸುರಿಹೊಂಡ ಭರತಖಂಡ ಮೊದಲಾದುವು.

ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ ಪಡೆದ **'ಇರುವುದೊಂದೇ ಭೂಮಿ'**ಯಿಂದ ಈ ಗದ್ಯಭಾಗವನ್ನು ಆರಿಸಿಕೊಳ್ಳಲಾಗಿದೆ.

**ಪ್ರಾಮಾಣಿಕತೆಗೆ ಫಲ ದಕ್ಕುತ್ತದೆ, ಆದರೆ ಬಹಳ ಸಮಯ ಕಾದಿರಬೇಕು – ಮಹಾತ್ಮ ಗಾಂಧಿ.**

## ಅರ್ಥತಿಳಿಯಿರಿ

**ಪರಿಕರ**=ಸಾಮಗ್ರಿ, ಸಲಕರಣೆ. **ಸವರು**=ನೇವರಿಸು, (ಕತ್ತರಿಸು). **ಹುದುಗು**=ಅಡಗು. **ಅತಿವೃಷ್ಟಿ**=ಹೆಚ್ಚು ಮಳೆ. **ಅಧ್ವಾನ**=ಹದಗೆಟ್ಟಸ್ಥಿತಿ. **ಗೊಂಡಾರಣ್ಯ**=ದಟ್ಟವಾದ ಕಾಡು. **ಅಸಂಖ್ಯ**= ಲೆಕ್ಕವಿಲ್ಲದಷ್ಟು. **ದುರ್ಗಮ**=ಪ್ರವೇಶಿಸಲಾಗದ. **ಪ್ರಪಾತ**=ಕಣಿವೆ. **ಹಿಮಶೀತಲ**= ಹಿಮದಷ್ಟು ತಣ್ಣಗಿನ. **ಗುಡಾಣ**=ದೊಡ್ಡಮಡಕೆ. **ಮಿರುಗು**=ಹೊಳೆ. **ಪತನ**=ಅವನತಿ, ಕೀಳುದೆಸೆ. **ಅತಿಕ್ರಮ**=ಗಡಿಮೀರು. **ಅರಣ್ಯ ಹುಟ್ಟುವಳಿ**=ಅರಣ್ಯ ಉತ್ಪನ್ನಗಳಿಂದ ಬರುವ ಆದಾಯ. **ಇಂಗಿಸು**=ಬತ್ತಿಸು. **ತತ್ತರಿಸು**=ನಡುಗು. **ನಿರ್ನಾಮ**=ಹೆಸರಿಲ್ಲದಂತೆ ಮಾಡು, ನಾಶ. **ಹಾವಳಿ**=ಉಪಟಳ. **ಪ್ರಕೋಪ**=ರೌದ್ರಾವೇಶ. **ಘಾಸಿ**=ತೊಂದರೆ, ಹಿಂಸೆ. **ಲಕ್ಷ್ಯ**=ಗಮನ. **ಸೂರೆ**=ಲೂಟಿ. **ಬಿಗಡಾಯಿಸು**=ಕೈಮೀರು. **ಲಗ್ಗೆ**=ಮುತ್ತಿಗೆ. **ಸಹ್ಯ**=ಸಹಿಸಲು ಸಾಧ್ಯವಾದುದು. **ನಿಕ್ಷೇಪ**=ನೆಲದೊಳಗೆ ಹುದುಗಿದ್ದ ಬೆಲೆಬಾಳುವ ವಸ್ತು. **ಸ್ವಾಹಾಕಾರ**=ನುಂಗುವುದು. **ಪೀಳಿಗೆ**=ವಂಶ.

## ಗಮನಿಸಿ

**ಕ್ಯಾಸನೂರು ರೋಗಾಣು**:ಇದೊಂದು ರೀತಿಯ ಸಾಂಕ್ರಾಮಿಕ ರೋಗದ ಅಣು. ಶಿವಮೊಗ್ಗ ಜಿಲ್ಲೆಯ ಕ್ಯಾಸನೂರಿನಲ್ಲಿ ಈ ರೋಗ ಮೊದಲು ಪತ್ತೆಯಾದುದರಿಂದ ಇದನ್ನು 'ಕ್ಯಾಸನೂರು ರೋಗಾಣು'ವೆಂದು ಕರೆಯಲಾಯಿತು.

**ಯಾಣ**:ಉತ್ತರ ಕನ್ನಡ ಜಿಲ್ಲೆಯಲ್ಲಿರುವ ಪ್ರೇಕ್ಷಣೀಯ ಸ್ಥಳ.

**ಲಾವಾಬಂಡೆ** : ಸಾಗರಗಳ, ಭೂಮಿಯ ಹೊರಕವಚವು ಉಬ್ಬಿ ಆದ ಪರ್ವತದ ಮಡಿಕೆಗಳಲ್ಲಿರುವ ಬಿರುಕುಗಳಿಂದ, ನೆಲದಾಳದ ತೀವ್ರ ತಾಪದಿಂದಾಗಿ ಕರಗಿದ ಘನವಸ್ತುಗಳು ಕಾದ ಕಬ್ಬಿಣದ ನೀರಿನಂತೆ ಹೊರಸೂಸುತ್ತದೆ. ಆ ಶಿಲಾದ್ರವವೇ ಲಾವ. ಭೂಮಿಯ ವಾತಾವರಣದ ಶೈತ್ಯದಿಂದ ಅದು ಮತ್ತೆ ಶಿಲೆಯಂತಾಗುತ್ತದೆ. ಅದೇ ಲಾವಾಬಂಡೆ. ಹೀಗೆ, ಲಾವ ಸೂಸುವ ಪ್ರದೇಶವೇ ಜ್ವಾಲಾಮುಖಿಗಳು. ಇಂತಹ ಅನೇಕ ಜ್ವಾಲಾಮುಖಿಗಳು ಏಶ್ಯಾಖಂಡದ ಕಮ್ಚಟ್ಕಾ ಪರ್ಯಾಯ ದ್ವೀಪ, ಜಪಾನ್, ಫಿಲಿಫೈನ್ಸ್, ನ್ಯೂಗಿನಿಯಾ, ನ್ಯೂಜಿಲ್ಯಾಂಡ್ ಮೊದಲಾದ ದ್ವೀಪಗಳಲ್ಲಿ ಇವೆ.



## ಅಭ್ಯಾಸ

**I. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಕರ್ನಾಟಕದಲ್ಲಿ ಹೆಚ್ಚು ಕಾಫಿ ಬೆಳೆಯುವ ಪ್ರದೇಶ ಯಾವುದು?

೨. ಪಶ್ಚಿಮ ಘಟ್ಟಗಳು ಯಾವೆಲ್ಲ ಜೀವಕೋಟಿಗಳಿಗೆ ಆಶ್ರಯ ತಾಣವಾಗಿವೆ?

೩. ಪಶ್ಚಿಮ ಘಟ್ಟಗಳ ನಿಜವಾದ ಪತನ ಯಾವಾಗ ಪ್ರಾರಂಭವಾಯಿತು?

೪. ರೈತರು ಅತಿಕ್ರಮಣ ಸಾಗುವಳಿ ಪ್ರಾರಂಭಿಸಲು ಕಾರಣವೇನು?

**ಎಂತಹ ಕಠಿಣ ಕೆಲಸವನ್ನಾದರೂ ಆತ್ಮವಿಶ್ವಾಸದಿಂದ ಮಾಡಿಮುಗಿಸಬಹುದು – ಥಾಮಸ್ ಆಲ್ವಾ ಎಡಿಸನ್.**

೫. ಸರಕಾರವು ಪಶ್ಚಿಮ ಘಟ್ಟಕ್ಕೆ ಲಗ್ಗೆ ಹಾಕಿದ್ದು ಏಕೆ?

೬. ಪಶ್ಚಿಮ ಘಟ್ಟಗಳು ಯಾವುದರಿಂದ ತತ್ತರಿಸುತ್ತಿವೆ?

೭. ಪ್ರವಾಹದ ಹಾವಳಿ ಹೆಚ್ಚಾಗಲು ಕಾರಣವೇನು?

೮. ಕಾಡಿನ ಪ್ರಾಣಿಗಳು ನಾಡಿಗೆ ಬಂದದ್ದೇಕೆ?

೯. ಅರಣ್ಯಗಳ ಸ್ವಾಹಾಕಾರ ಹೀಗೆಯೇ ಮುಂದುವರಿದರೆ ಏನಾಗಬಹುದು?

**II. ಈ ಪ್ರಶ್ನೆಗಳಿಗೆ ೩-೪ ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಪಶ್ಚಿಮ ಘಟ್ಟಗಳ ಉತ್ಪನ್ನಗಳು ನಮ್ಮ ದಿನನಿತ್ಯದ ಬದುಕಿಗೆ ಹೇಗೆ ಸಹಕಾರಿಯಾಗಿವೆ?

೨. ಪಶ್ಚಿಮ ಘಟ್ಟಗಳನ್ನು ಅತಿಯಾಗಿ ದೋಚಿದುದರ ಪರಿಣಾಮವೇನು?

೩. ಪಶ್ಚಿಮ ಘಟ್ಟದ ನೆಲದ ನಿಸರ್ಗನಿರ್ಮಿತ ಸಂಗ್ರಹಾಲಯದಲ್ಲಿ ಇರುವುದೇನು?

೪. ಪ್ರಕೃತಿಯು ಮಾನವನಿಗೆ ತನ್ನ ಪ್ರತಿಭಟನೆಯನ್ನು ಹೇಗೆ ತೋರಿದೆ?

೫. ಪಶ್ಚಿಮ ಘಟ್ಟಗಳು ಯಾವುದರ ಗುಡಾಣವಾಗಿವೆ?

೬. ಪಶ್ಚಿಮ ಘಟ್ಟಗಳ ಪತನ ಗದ್ಯಭಾಗವನ್ನು ಓದಿದ ನಂತರ ನಿಮಗೆ ಏನನಿಸಿತು?

**III. ಸಂದರ್ಭದೊಂದಿಗೆ ವಿವರಿಸಿ.**

೧. ಮರುಭೂಮಿಯನ್ನು ನೋಡಲು ದೂರದ ರಾಜಸ್ಥಾನಕ್ಕೆ ಹೋಗುವುದು ಬೇಡ.

೨. ಕಾಪಾಡಬೇಕಿದ್ದ ಮಾಲೀಕನೆ ತನ್ನ ನೂರು ತೋಳುಗಳಿಂದ ಕಾಡಿಗೆ ಕೊಡಲಿ ಬೀಸಿದ್ದ.

೩. ಸಹ್ಯ ಪರ್ವತವು ಈಗ ಅಸಹ್ಯ ಪರ್ವತವಾಗುತ್ತಿದೆ

೪. ನೀರಿನ ನಿಕ್ಷೇಪ ಖಾಲಿಯಾಗುತ್ತಿದೆ.



**IV. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಪಶ್ಚಿಮ ಘಟ್ಟಗಳ ನಿಜವಾದ ಪತನ ಹೇಗಾಗುತ್ತಿದೆ?

೨. ಸಹ್ಯಾದ್ರಿ ಸಹನೆ ಕಳೆದುಕೊಳ್ಳಲು ಕಾರಣವೇನು? ಅದರ ಪರಿಣಾಮವೇನು? ವಿವರಿಸಿ.

೩. ಹಸಿರು ಪರಿಸರ ಸಂರಕ್ಷಣೆಯಲ್ಲಿ ವಿದ್ಯಾರ್ಥಿಗಳು ಹೇಗೆ ಕೈ ಜೋಡಿಸಬಹುದು?

**V. ಇವುಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

ಸಹನೆ, ದೂರ, ಅತಿವೃಷ್ಟಿ, ಕತ್ತಲು

ತೆಳ್ಳಗಿನ ದಾರವೊಂದು ಗಾಳಿಪಟವನ್ನು ನಿಯಂತ್ರಿಸುವಂತೆ ಮಾನವನ ಸಹನೆ ಆತನನ್ನು ನಿಯಂತ್ರಿಸುತ್ತದೆ – ಮಹಾವೀರ.

**VI. ಈ ಪದಗಳನ್ನು ಬಿಂಗಡಿಸಿ, ಸಂಧಿಯನ್ನು ಹೆಸರಿಸಿ.**

ಲಕ್ಷಾಂತರ, ಹಾದಿಯಲ್ಲಿ, ಸಂಗ್ರಹಾಲಯ, ಸಹ್ಯಾದ್ರಿ

**VII. ಕೆಳಗಿನ ನುಡಿಗಟ್ಟುಗಳನ್ನು ನಿಮ್ಮ ಸ್ವಂತ ವಾಕ್ಯದಲ್ಲಿ ಬಳಸಿ ಬರೆಯಿರಿ.**

ಅತಿಯಾಗಿ ತತ್ತರಿಸು, ಹತ್ತುಹಲವು ಕಡೆ, ಸಹನೆ ಕಳೆದುಕೊಳ್ಳು, ಸಮಸ್ಯೆ ಬಿಗಡಾಯಿಸು.

**VIII. ಕೆಳಗಿನ ಪದಗಳಿಗೆ ಸಂಸ್ಕೃತ –ತದ್ಭವ ರೂಪ ಬರೆಯಿರಿ**

ಉದ್ದಿಮೆ, ವನ, ಆಶ್ರಯ, ವಿಸ್ತಾರ, ಬೆತ್ತ, ಆಕಾಶ, ತಾಣ, ಸೂಜಿ, ಬೇಸಗೆ, ಮೃಗ.

## ಭಾಷಾಭ್ಯಾಸ

'ಪೆನ್ನಿನಿಂದ ಕಾಗದದ ಮೇಲೆ ಸ್ಪಷ್ಟವಾಗಿ ಬರೆಯಿರಿ'. ನಿಮಗೆ ಗೊತ್ತು, ಇದೊಂದು ಕನ್ನಡದ ವಾಕ್ಯ. ಆದರೆ, ಈ ವಾಕ್ಯದಲ್ಲಿರುವ ಐದು ಪದಗಳಲ್ಲಿ ಎರಡು ಮಾತ್ರ ಕನ್ನಡದ್ದು. ಉಳಿದ 'ಪೆನ್ನು' ಆಂಗ್ಲಪದ, 'ಕಾಗಜ್' ಎಂಬ ಹಿಂದಿ ಪದದಿಂದ ಕಾಗದ ಎಂದಾಗಿದೆ, 'ಸ್ಪಷ್ಟ' ಎಂಬುದು ಸಂಸ್ಕೃತ ಪದ. ಹೀಗೆ ಅನೇಕ ಅನ್ಯಭಾಷಾ ಪದಗಳಿಂದ ಇಂದಿನ ಕನ್ನಡ ಭಾಷೆಯು ಶ್ರೀಮಂತವಾಗಿದೆ. ಈ ರೀತಿಯಲ್ಲಿ ಶಬ್ದಗಳನ್ನು ಬೇರೊಂದು ಭಾಷೆಯಿಂದ ಕೊಳ್ಳುವ ಕ್ರಿಯೆಯು ಎಲ್ಲ ಭಾಷೆಯಲ್ಲೂ ನಡೆಯುತ್ತಲಿರುತ್ತದೆ. ಇದು ಸಹಜ ಕ್ರಿಯೆಯು ಆಗಿದೆ. ಹೀಗೆ ಬೇರೆ ಭಾಷೆಗಳಿಂದ ಬಂದ ಪದಗಳನ್ನು 'ಅನ್ಯದೇಶ್ಯ'ಗಳೆಂದು ಕರೆಯುವರು. ಈ ಪಾಠದಲ್ಲಿ ಬಂದಿರುವ ಅನ್ಯದೇಶ್ಯ ಪದಗಳನ್ನು ಪಟ್ಟಿಮಾಡಿ. ಅವು ಯಾವ ಭಾಷೆಯಿಂದ ಬಂದಿವೆ ಎಂಬುದನ್ನು ತಿಳಿಯಿರಿ.

ಪಶ್ಚಿಮ=ಪಡುವಣ, ಹಾಗೆಯೇ ಇತರ ದಿಕ್ಕುಗಳಿಗೆ ಇರುವ ಕನ್ನಡ ಪದಗಳನ್ನು ತಿಳಿದು ಬರೆಯಿರಿ.
ವಿಚಿತ್ರ=ವೈಚಿತ್ರ್ಯ–ಇಂತಹ ಪದಗಳನ್ನು ಪಟ್ಟಿ ಮಾಡಿ.



## ಚಟುವಟಿಕೆ

೧. ನಿಮ್ಮ ಪರಿಸರದಲ್ಲಿ ದೊರೆಯುವ ಪ್ರಾಕೃತಿಕ ಉತ್ಪನ್ನಗಳ ಪಟ್ಟಿ ಮಾಡಿರಿ. ಅವುಗಳ ಲೂಟಿಯನ್ನು ತಡೆಯಲು ನೀವೇನು ಮಾಡಬಹುದು ಎಂಬುದನ್ನು ಯೋಚಿಸಿರಿ.

೨. ನಾಗೇಶ ಹೆಗಡೆಯವರ 'ಇರುವುದೊಂದೇ ಭೂಮಿ' ಕೃತಿಯನ್ನು ಓದಿ.

೩. ಪರಿಸರ ರಕ್ಷಣೆಗಾಗಿ ನಡೆದ ಚಿಪ್ಕೋ, ಅಪ್ಪಿಕೋ ಚಳವಳಿಗಳ ಬಗ್ಗೆ ತಿಳಿಯಿರಿ.

೪. "ಪರಿಸರ ಸಂರಕ್ಷಣೆ ಇಂದಿನ ಅಗತ್ಯ' ಈ ಕುರಿತು ನಿಮ್ಮ ಗೆಳೆಯನಿಗೆ ಒಂದು ಪತ್ರ ಬರೆಯಿರಿ.

೫. 'ಪರಿಸರ ಸಂರಕ್ಷಣೆಯಲ್ಲಿ ಸಾಲುಮರದ ತಿಮ್ಮಕ್ಕ' ಈ ವಿಷಯವಾಗಿ ಪ್ರಬಂಧ ಬರೆದು ತರಗತಿಯಲ್ಲಿ ಓದಿರಿ; ಭಿತ್ತಿಪತ್ರಿಕೆಯಲ್ಲೂ ಪ್ರದರ್ಶಿಸಿ.

**ಆಸೆಗಳ ಮೇಲೆ ನಿಯಂತ್ರಣ ಹೊಂದುವ ಸಾಮರ್ಥ್ಯದಿಂದಲೇ ವ್ಯಕ್ತಿತ್ವ ರೂಪುಗೊಳ್ಳುತ್ತದೆ–ಜಾರ್ಜ್ ಬರ್ನಾಡ್ ಷಾ.**

೬. ನಿಮ್ಮ ಊರಿನಲ್ಲಿ ಹತ್ತಿಪ್ಪತ್ತು ವರ್ಷಗಳ ಹಿಂದೆ ಪರಿಸರವು ಹೇಗಿತ್ತು ಎಂಬ ಬಗ್ಗೆ ಹಿರಿಯರಿಂದ ಮಾಹಿತಿಯನ್ನು ಸಂಗ್ರಹಿಸಿ, ಈಗ ಹೇಗಿದೆ ಎಂಬುದನ್ನು ಪರಿಶೀಲಿಸಿ ತರಗತಿಯಲ್ಲಿ ಚರ್ಚಿಸಿ.

## ವ್ಯಾಕರಣಾಂಶ

**ನಾಮವಿಭಕ್ತಿಗಳು** : ಎಲ್ಲ (ನಾಮ ಮತ್ತು ಕ್ರಿಯಾ) ಪ್ರಕೃತಿ ರೂಪದಲ್ಲಿರುವ ಪದಗಳು ಪ್ರತ್ಯಯಗಳನ್ನು ಹೊಂದಿಯೇ ವ್ಯವಹರಿಸಲ್ಪಡುತ್ತದೆ. ನಾಮಪ್ರಕೃತಿಗೆ ಸೇರುವ ಪ್ರತ್ಯಯಗಳನ್ನು ನಾಮವಿಭಕ್ತಿಪ್ರತ್ಯಯಗಳು ಎನ್ನುತ್ತಾರೆ. ಈ ಹಿಂದೆ ಹೇಳಿದ ಎಲ್ಲಾ ಬಗೆಯ ನಾಮಪ್ರಕೃತಿಗಳಿಗೆ ಏಳುವಿಭಕ್ತಿ ಪ್ರತ್ಯಯಗಳು ಸೇರಿ ನಾಮಪದಗಳಾಗುತ್ತವೆ. ಕ್ರಿಯಾಪದದೊಂದಿಗೆ ನಾಮಪದದ ಸಂಬಂಧವನ್ನು ತಿಳಿಸುವ ಕರ್ತೃ, ಕರ್ಮ, ಕರಣ ಮುಂತಾದುವುಗಳು ಕಾರಕಾರ್ಥಗಳು. ಕಾರಕಾರ್ಥವನ್ನು ವಿಭಜಿಸಿ ಹೇಳುವ ಪ್ರತ್ಯಯಗಳೇ ವಿಭಕ್ತಿ ಪ್ರತ್ಯಯಗಳು. ಇವುಗಳ ಸ್ವರೂಪ ಈ ಕೆಳಗಿನಂತಿವೆ.

| ವಿಭಕ್ತಿ | ವಿಭಕ್ತಿಪ್ರತ್ಯಯ | ಕಾರಕಾರ್ಥ | ನಾಮಪದ |
|---|---|---|---|
| ಪ್ರಥಮಾ | ಉ | ಕರ್ತೃ | ಮನೆಯು |
| ದ್ವಿತೀಯಾ | ಅನ್ನು | ಕರ್ಮ | ಮನೆಯನ್ನು |
| ತೃತೀಯಾ | ಇಂದ | ಕರಣ (ಸಾಧನ) | ಮನೆಯಿಂದ |
| ಚತುರ್ಥೀ | ಕೆ, ಗೆ, ಇಕೆ | ಸಂಪ್ರದಾನ (ಕೊಡುವಿಕೆ) | ಮನೆಗೆ |
| ಪಂಚಮೀ | ದೆಸೆಯಿಂದ | ಅಪಾದಾನ (ಅಗಲುವಿಕೆ) | ಮನೆಯ ದೆಸೆಯಿಂದ |
| ಷಷ್ಠೀ | ಅ | ಸಂಬಂಧ | ಮನೆಯ |
| ಸಪ್ತಮೀ | ಅಲ್ಲಿ | ಅಧಿಕರಣ (ಆಧಾರವಾಗಿರುವುದು) | ಮನೆಯಲ್ಲಿ |



ಕಾರಕವೆಂಬುದು ಕ್ರಿಯಾನಿಮಿತ್ತ. 'ಮಾಡಿಸುವ' ಅಥವಾ 'ಮಾಡಿಸುವ ಪದಾರ್ಥವನ್ನು ಸೂಚಿಸುವು'ದೇ **ಕಾರಕ.** ವಿಭಕ್ತಿಗಳು ಏಳು ಇದ್ದರೂ ಕಾರಕ ಆರು ಮಾತ್ರ. ಆರನೆಯದಾದ ಷಷ್ಠೀ ವಿಭಕ್ತಿ ಪ್ರತ್ಯಯವಾದ 'ಅ' ಎಂಬುದು ಕ್ರಿಯೆಗೆ ನೇರವಾಗಿ ಸಂಬಂಧಪಟ್ಟಿಲ್ಲವಾದುದರಿಂದ ಅದಕ್ಕೆ ಕಾರಕ ಇಲ್ಲ. 'ರಾಮನ' ಎಂಬ ಷಷ್ಠೀ ವಿಭಕ್ತಿಯಿಂದ ಕೂಡಿದ ಪದದ ಮುಂದೆ ನೇರವಾಗಿ ಕ್ರಿಯಾಪದವನ್ನು ಇರಿಸಲು ಸಾಧ್ಯವಿಲ್ಲ.

**ನೀನು ಮಾಡಿದ ತಪ್ಪುಗಳು ಇತರರಿಗೆ ತಿಳಿಯದಿದ್ದರೂ ನಿನ್ನ ಅಂತರಂಗಕ್ಕೆ ತಿಳಿಯುತ್ತದೆಂಬುದನ್ನು ತಿಳಿದಿರು–ಗೌತಮಬುದ್ಧ.**

ಇಂತಹ ಹತ್ತಾರು ನಿಯಮಗಳು ಭಾಷೆಗೆ ಇರುವುದರಿಂದ ಹಿಂದಿನ ಕೃತಿಯು ಇಂದಿನವರಿಗೆ, ಇಂದಿನದ್ದು ಮುಂದಿನವರಿಗೆ ಅರ್ಥವಾಗುತ್ತದೆ. ಆದುದರಿಂದ ಬರೆವಣಿಗೆಯ ಭಾಷೆ ಶುದ್ಧವೂ ಸ್ಪಷ್ಟವೂ ಆಗಿರಬೇಕು. ಆದರೆ ಭಾಷೆಯು ಬೆಳೆಯುವುದು ಬಳಸುವುದರಿಂದ. ಈ ಸಂದರ್ಭದಲ್ಲಿ ಬೇರೆ ಭಾಷೆಯ, ಬೇರೆ ಸಮಾಜದವರ, ನಮ್ಮದೆ ಪ್ರಾದೇಶಿಕ ಭಾಷೆಯ ಪ್ರಭಾವ ಆಗುವುದೂ ಸಹಜ. ಇದರಿಂದಾಗಿ ನಮ್ಮ ಆಡುಮಾತಿನಲ್ಲೂ ಒಂದಷ್ಟು ಬದಲಾವಣೆ, ವಿಲಕ್ಷಣತೆ, ವ್ಯಾಕರಣದ ನಿಯಮಕ್ಕೆ ವಿರುದ್ಧವಾದುದು ಪ್ರಾಪ್ತವಾಗುತ್ತದೆ. ಅದರಲ್ಲಿ **ವಿಭಕ್ತಿ ಪಲ್ಲಟವೂ** ಒಂದು. ಮಾತಿನಲ್ಲಾಗುತ್ತಿರುವ ಇಂತಹ ಬದಲಾವಣೆಗಳು ಎಷ್ಟೋಬಾರಿ ಬರೆಹದಲ್ಲೂ ತಲೆಹಾಕುವುದುಂಟು.

**ವಿಭಕ್ತಿಪಲ್ಲಟ** : **'ತಾಯೆ ಬಾರ ಮೊಗವ ತೋರ'** ಈ ಕವನದ ಸಾಲಲ್ಲಿ ಮೊಗವನ್ನು ತೋರು ಎಂಬುದರ ಬದಲಿಗೆ ಮೊಗವ ತೋರ ಎಂದಾಗಿದೆ. ಜುಟ್ಟನ್ನು ಓರಣವಾಗಿ ಕಟ್ಟಿ ಎಂಬುದನ್ನು ಜುಟ್ಟು ಓರಣವಾಗಿ ಕಟ್ಟಿ ಎಂದೂ, ಮಾಂಗಲ್ಯವನ್ನು ಕಟ್ಟುವುದು, ಮಾಂಗಲ್ಯ ಕಟ್ಟುವುದಾಗಿಯೂ, ಊರೂರಲ್ಲಿ ತಿರುಗುತ್ತ ಎಂದಿರಬೇಕಾದುದು ಊರೂರು ತಿರುಗುತ್ತ ಎಂದೂ ಆಗುವುದುಂಟು. ಕೋಲಿನಿಂದ ಹೊಡೆ ಎಂಬುದು ಕೋಲಲ್ಲಿ ಹೊಡೆ ಎಂದೂ, ರಾಮನಲ್ಲಿ ಹೇಳು ಎಂಬುದು ರಾಮನಿಗೆ ಹೇಳು ಎಂದೂ ಬಳಕೆಯಾಗುತ್ತಿದೆ. ಇಂತಹ ಬದಲಾವಣೆ ಅಲ್ಲೊಂದು ಇಲ್ಲೊಂದು ಮಾತ್ರ ಆಗುತ್ತಿರುತ್ತದೆ. ಇಂತಹ ಬದಲಾವಣೆಯನ್ನು ವ್ಯಾಕರಣಕಾರರೇ ಒಪ್ಪಿಕೊಂಡಿದ್ದಾರೆ ಎಂಬುದರಿಂದ ಇದನ್ನು ಎಲ್ಲಾ ಕಡೆ ಮಾಡುತ್ತಾ ಹೋಗಬಾರದು.

ಜೀವಂತವಾಗಿರುವ ಭಾಷೆಯಲ್ಲಿ ಇಂತಹ ಬದಲಾವಣೆಗಳು ಆಡುಮಾತಿನಲ್ಲಿ ಹೆಚ್ಚಾಗಿ ಇದ್ದರೂ ಬರೆಹರೂಪಕ್ಕೆ ಅದು ಬರುವಾಗ ಶುದ್ಧ ರೂಪದಲ್ಲಿಯೇ ಇರುತ್ತದೆಯಾದುದರಿಂದ ಅದು ಬಹುಕಾಲ ಉಳಿಯುತ್ತದೆ. ಆದೇ ಆಡುಮಾತು ಗ್ರಂಥಸ್ಥವಾದರೆ ಪುಸ್ತಕದಲ್ಲಷ್ಟೇ ಉಳಿಯುತ್ತದೆಯೇ ಹೊರತು ಅದನ್ನು ಓದಿ ಪ್ರಯೋಜನ ಪಡೆದುಕೊಳ್ಳುವವರು ಬೆರಳೆಣಿಕೆಯಷ್ಟು ಜನಮಾತ್ರ. ಈ ಎಲ್ಲ ಕಾರಣಗಳಿಂದಾಗಿ ನಮ್ಮ ಬರೆಹದ ಭಾಷೆ ಶುದ್ಧವೂ ಸ್ಪಷ್ಟವೂ ಆಗಿರಬೇಕಾದುದು ಅನಿವಾರ್ಯ.





**ಗೆಳೆತನ ಬೆಳೆಸಲು ಸಾವಿರಾರು ಮಾತು ಬೇಕು, ಶತ್ರುವನ್ನು ಸೃಷ್ಟಿಸಲು ಒಂದೇ ಮಾತು ಸಾಕು – ಗಾಂಧೀಜಿ.**

# ಗದ್ಯ–೫

# ಎಲ್ಲಿ ಹೋಗ್ಯಾವೋ ಆ ಕಾಲ

*ಡಾ॥ ಗುರುರಾಜ ಕರಜಗಿ*

**ಪಾಠಪ್ರವೇಶ:** ಮಕ್ಕಳ ಮೇಲೆ ಬಹಳವಾಗಿ ಪ್ರಭಾವ ಬೀರುವ ಸಾಮರ್ಥ್ಯವಿರುವುದು ಶಿಕ್ಷಕರಿಗೆ ಮಾತ್ರ. ಮುಗ್ಧ ಮನಸ್ಸುಗಳನ್ನು ತಿದ್ದಿ, ತೀಡಿ ಸರಿಯಾದ ರೂಪಕೊಟ್ಟು ಸರಿದಾರಿಯತ್ತ ಕರೆದೊಯ್ಯುವ ಗುರುಗಳು ಮಕ್ಕಳಿಗೆ ಮಾದರಿಯಾಗುತ್ತಾರೆ. ಆದರ್ಶ ವಿದ್ಯಾರ್ಥಿಯಾದವನು ಅದನ್ನು ಸದುಪಯೋಗಪಡಿಸಿಕೊಂಡು ತನ್ನ ಗುರಿ ತಲುಪಲು ಪ್ರಯತ್ನಿಸುತ್ತಾನೆ. ಇದಕ್ಕೆ ಶ್ರೀರಾಮ, ಏಕಲವ್ಯ, ಶಿವಾಜಿ ಮೊದಲಾದವರು ಪುರಾಣ–ಇತಿಹಾಸಗಳಲ್ಲಿ ನಿದರ್ಶನರಾಗಿದ್ದಾರೆ. ಕೇವಲ ಪಾಠ ಬೋಧನೆಯಷ್ಟೇ ತನ್ನ ಕರ್ತವ್ಯವೆಂದೆಣಿಸದ ಪ್ರಾಮಾಣಿಕ ಶಿಕ್ಷಕರೊಬ್ಬರು ಸೂಕ್ತ ಸಮಯದಲ್ಲಿ ಅರ್ಹ ವಿದ್ಯಾರ್ಥಿಗೆ ನೀಡಿದ ಸಕಾಲಿಕ ಮಾರ್ಗದರ್ಶನವು ಎಷ್ಟು ಪರಿಣಾಮಕಾರಿಯಾಗಿತ್ತು ಎಂಬುದಕ್ಕೆ ಈ ಲೇಖನವೇ ಸಾಕ್ಷಿ. ಹಾಗೆಯೇ ಅದು ಬೀರಿದ ಪ್ರಭಾವದಿಂದಾಗಿ ಉಪಕಾರಸ್ಮರಣೆಗೈಯುವ ಶಿಷ್ಯನೊಬ್ಬನ ಪ್ರತಿಕ್ರಿಯೆ, ವರ್ತನೆ ಅನುಕರಣೀಯ.

ನನ್ನ ಮೇಲೆ ಅತ್ಯಂತ ಪ್ರಭಾವ ಬೀರಿದ ಘಟನೆ ಇದು. ನನ್ನಜ್ಜ ತುಂಬ ಬಡತನದಲ್ಲಿ ಬೆಳೆದವರು. ಆದರೆ ಸ್ವಾಭಿಮಾನ ಬಿಟ್ಟವರಲ್ಲ. ಮೂರು ದಶಕಗಳಿಗೂ ಮಿಗಿಲಾಗಿ ಶಿಕ್ಷಕರಾಗಿ ಕೆಲಸಮಾಡಿ ನಿವೃತ್ತರಾದವರು. ನಾನು ಹೇಳುವ ಘಟನೆ ನಡೆದದ್ದು ೧೯೬೨ ರಲ್ಲಿ. ನಮ್ಮ ದೇಶದ ಮೇಲೆ ಚೀನಾ ದಾಳಿ ಮಾಡಿತ್ತು. ಆಗ ಭಾರತದಲ್ಲಿ ರೇಶನ್ ಪದ್ಧತಿ ಜಾರಿಗೆ ಬಂತು. ಎಲ್ಲರೂ ಸರದಿಯಲ್ಲಿ ನಿಂತು ಅಕ್ಕಿ, ಸಕ್ಕರೆ, ಸೀಮೆಎಣ್ಣೆ ಪಡೆದುಕೊಳ್ಳಬೇಕಿತ್ತು. ಅದಲ್ಲದೆ ನಮ್ಮ ರಾಜ್ಯದಲ್ಲಿ ಒಂದು ಜಿಲ್ಲೆಯಿಂದ ಮತ್ತೊಂದು ಜಿಲ್ಲೆಗೆ ಅಕ್ಕಿ ಮತ್ತು ಸಕ್ಕರೆಯನ್ನು ಸರ್ಕಾರದ ಪರವಾನಿಗೆ ಇಲ್ಲದೆ ಒಯ್ಯುವಂತಿರಲಿಲ್ಲ. ಆ ಸಮಯದಲ್ಲಿ ಧಾರವಾಡದಲ್ಲಿದ್ದ ನಮ್ಮ ಅಜ್ಜನಿಗೆ ವಿಜಾಪುರದಿಂದ ಒಂದು ಪತ್ರ ಬಂದಿತ್ತು. ತಮ್ಮ ಸಂಬಂಧಿಕರಲ್ಲಿ ಯಾರಿಗೋ ಹೆರಿಗೆಯಾಗಿರುವುದಾಗಿಯೂ ಅಲ್ಲಿ ಒಳ್ಳೆಯ ಅಕ್ಕಿ ಸಿಗದಿರುವುದರಿಂದ ಧಾರವಾಡದಿಂದ ಒಂದಷ್ಟನ್ನು ತರಬಹುದೇ ಎಂದು ಕೇಳಿದ್ದರು. ನಮ್ಮ ಅಜ್ಜನಿಗೆ ಕಾಯಿದೆ ಗೊತ್ತಿತ್ತು. ಆದರೆ ಹೃದಯದಲ್ಲಿಯ ಪ್ರೀತಿ ಕಾಯಿದೆಯನ್ನು ಮೀರಲು ಪ್ರೋತ್ಸಾಹಿಸಿತು. ಆತ ಐದು ಕಿಲೋ ಅಕ್ಕಿಯನ್ನು ಕೊಂಡು ಅದನ್ನೊಂದು ಹಾಸಿಗೆ ಸುರುಳಿಯಲ್ಲಿ ಸುತ್ತಿದರು. ಅಜ್ಜ ಮತ್ತು ನಾನು ವಿಜಾಪುರಕ್ಕೆ ರೈಲಿನಲ್ಲಿ ಹೋದೆವು.

ವಿಜಾಪುರ ನಿಲ್ದಾಣದಲ್ಲಿ ಇಳಿದ ಮೇಲೆ ಅಜ್ಜ ತನ್ನ ಎಡಹೆಗಲ ಮೇಲೆ ಹಾಸಿಗೆಸುರುಳಿ ಹೊತ್ತು ನನ್ನನ್ನು ಬಲಗೈಯಿಂದ ಎಳೆಯುತ್ತ ಹೊರನಡೆದರು. ಯಾರಕೈಗೂ ಸಿಗದೆ ಬೇಗನೇ ನಿಲ್ದಾಣದಿಂದ ಹೊರಬರುವುದು ಅವರ ಇಚ್ಛೆಯಾಗಿತ್ತು. ಇನ್ನೇನು ನಾವು ನಿಲ್ದಾಣದಿಂದ ಹೊರಬರಬೇಕು, ಅಷ್ಟರಲ್ಲಿ ಯಾರೋ ಅಜ್ಜನ ಹೆಗಲ ಮೇಲೆ ಕೈ ಇಟ್ಟರು. ತಿರುಗಿ ನೋಡಿದರೆ ಒಬ್ಬ ಪೊಲೀಸ್! ಅಜ್ಜ ಬೆವರಿಬಿಟ್ಟರು, "ನಡೀರಿ, ನಿಮ್ಮನ್ನು ಸಾಹೇಬ್ರು ಕರೀತಿದಾರೆ" ಎಂದು ಗುಡುಗಿದ ಪೊಲೀಸ್. ತಾನು ಅಕ್ಕಿ ತಂದದ್ದು ಪೊಲೀಸರಿಗೆ ಹೇಗೋ ಗೊತ್ತಾಯಿತಲ್ಲ ಎಂಬ ಗಾಬರಿಯಿಂದ, ಆಶ್ಚರ್ಯದಿಂದ ನನ್ನನ್ನೆಳೆದುಕೊಂಡು

**ದುಃಖಕ್ಕೆ ಪರಮೌಷಧವೆಂದರೆ ಕ್ರಿಯಾಶೀಲತೆ – ಜಾರ್ಜ್ ಹೆನ್ರೀ ಲೂಯಿಸ್.**

ಪೋಲೀಸನನ್ನು ಹಿಂಬಾಲಿಸಿದ. ಆತ ನಮ್ಮನ್ನು ನಿಲ್ದಾಣದ ಹೊರಗೆ ಕರೆದುಕೊಂಡು ಬಂದು ಅಲ್ಲಿ ನಿಂತಿದ್ದ ಒಂದು ಪೊಲೀಸ್ ಜೀಪನ್ನು ತೋರಿಸಿ ಒರಟಾಗಿ ಹೇಳಿದ. "ಅದರಲ್ಲಿ ಹೋಗ್ರಿ, ಸಾಹೇಬ್ರನ್ನ ಭೆಟ್ಟಿ ಆಗ್ರಿ." ನನ್ನ ಅಜ್ಜ ಕುಸಿದುಹೋದರು. ಆಗಿನ ಕಾಲದಲ್ಲಿ ಪೋಲೀಸ್ ಜೀಪಿನಲ್ಲಿ ಹೋಗುವಷ್ಟು ಅವಮಾನಕರವಾದ ಸಂಗತಿ ಮತ್ತೊಂದಿರಲಿಲ್ಲ. ಈಗ ಜನ ಪೊಲೀಸ್ ಜೀಪಿನಲ್ಲಿ ಪಿಕ್‌ನಿಕ್‌ಗೆ ಹೋಗುತ್ತಿರಬಹುದು. ಅಜ್ಜ ತನ್ನನ್ನೇ ಶಪಿಸುತ್ತ, ಎಲ್ಲದಕ್ಕೂ ಕಾರಣವಾದ ಆ ಅಕ್ಕಿಯ ಗಂಟನ್ನು ಆಸನದ ಕೆಳಗೆ ಹಾಕಿ ತಾನು ಕುಳಿತು ನನ್ನನ್ನು ಎಳೆದುಕೊಂಡ.

ಜೀಪು ಒಂದು ಬಹುದೊಡ್ಡ ಬಂಗಲೆಯ ಮುಂದೆ ನಿಂತಿತು. ಅದು ಜಿಲ್ಲಾ ಪೊಲೀಸ್ ಅಧಿಕಾರಿಯ ಮನೆ. ಆಗ ಜಿಲ್ಲೆಯ ಅಧಿಕಾರಿ ಎಂದರೆ ಬಹುದೊಡ್ಡ ಹುದ್ದೆ. ಅಷ್ಟುದೊಡ್ಡ ಮನೆಯನ್ನು ನಾನು ಕಂಡಿರಲೇ ಇಲ್ಲ. ಒಳಗೆ ನಡೆದು ಹೊರ ಕೋಣೆಯಲ್ಲಿ ಕೈದಿಗಳ ಹಾಗೆ ಕುಳಿತುಕೊಂಡೆವು. ಐದಾರು ನಿಮಿಷಗಳ ನಂತರ ಮತ್ತೊಬ್ಬ ಪೋಲೀಸ್ ಹೊರಗೆ ಬಂದು, "ಒಳಗೆ ಬನ್ನಿ, ಸಾಹೇಬರು ಕರೀತಿದ್ದಾರೆ" ಎಂದ. ಅಜ್ಜನನ್ನು ಹಿಂಬಾಲಿಸಿ ನಾನೂ ನಡೆದೆ. ಅದೊಂದು ದೊಡ್ಡ ಹಾಲ್. ತುಂಬಾ ಚೆನ್ನಾಗಿ ಅಲಂಕಾರ ಮಾಡಿದ್ದರು. ಮಧ್ಯದಲ್ಲಿ ಒಬ್ಬ ದಾಂಡಿಗ, ಕಪ್ಪು ಮನುಷ್ಯ, ದೊಡ್ಡ ಕಲ್ಲೀಮೀಸೆ ಹೊತ್ತು ನಿಂತಿದ್ದಾನೆ. ಅವನ ಪಕ್ಕದಲ್ಲೊಬ್ಬಳು ಹೆಂಗಸು. ಅಲ್ಲಲ್ಲಿ ಇನ್ನಿಬ್ಬರು ಪೊಲೀಸರು. ಅಜ್ಜ ಒಳಗೆ ಕಾಲಿಡುತ್ತಿದ್ದಂತೆಯೇ ಅಪರಾಧೀಭಾವದಿಂದ ಕೈ ಮುಗಿದು "ತಪ್ಪಾತರೀ ಸಾಹೇಬರ" ಎಂದ.

ಅದನ್ನು ಕೇಳಿದ ಆ ದೊಡ್ಡ ಮನುಷ್ಯ ಒಂದು ಹೆಜ್ಜೆ ಮುಂದಿಟ್ಟು ಒಂದೂ ಮಾತನಾಡದೆ ನೆಲದ ಮೇಲೆ ದೀರ್ಘದಂಡ ಪ್ರಣಾಮ ಮಾಡಿ ಅಜ್ಜನ ಕಾಲು ಹಿಡಿದುಕೊಂಡು ಅಳತೊಡಗಿದ.





ಅಜ್ಜನಿಗೆ ಗಾಬರಿ, "ನೀವ್ಯಾರು ಸಾಹೇಬ್ರ?" ಎಂದು ಕೇಳಿದ. ಪೋಲೀಸರಿಗೂ ಗಾಬರಿ. ಅವರು ಇದುವರೆಗೂ ಸಾಹೇಬರು ಮತ್ತೊಬ್ಬರಿಗೆ ನಮಸ್ಕಾರ ಮಾಡುವುದನ್ನು ಕಂಡಿರಲಿಲ್ಲ.

**ಒಗ್ಗಟ್ಟಿನ ಕಾರ್ಯವನ್ನು ಹುತ್ತ ಕಟ್ಟುವ ಗೆದ್ದಲುಗಳನ್ನು ನೋಡಿಕಲಿ – ಮಹಾತ್ಮ ಗಾಂಧಿ.**

ಪೋಲೀಸ್ ಅಧಿಕಾರಿ ಎದ್ದು ನಿಂತ. ಕೈ ಮುಗಿದಿದ್ದಾನೆ. ಕಣ್ಣಲ್ಲಿ ನೀರು ಸೋರುತ್ತಿದೆ. "ನನ್ನ ಗುರುತು ಹತ್ತಲಿಲ್ಲರೀ ಸರ್?" ಎಂದ.

"ಇಲ್ಲ, ಗುರುತು ಸಿಗಲಿಲ್ಲ", ಎಂದ ಅಜ್ಜ.

"ನಾನ್ರೀ ಸರ್, ಭೀಮ, ಮುರುಗೋಡ ಭೀಮ್ಯಾ. ಮುಳವಾಡದಾಗ ನಿಮ್ಮ ಮನ್ಯಾಗಿದ್ದು ಕಲೀತಿದ್ದೆನಲ್ಲಾ ಸರ್" ಎಂದ.

ಅಜ್ಜ ಕೈಮುಗಿದು ನಿಂತಿದ್ದರಲ್ಲ, ಬಲಗೈ ಕೆಳಗೆ ಇಳಿಯಿತು. ಥಟ್ಟನೇ ಅದನ್ನೆತ್ತಿ ಸಾಹೇಬರ ಕಪಾಳಿಗೆ ಹೊಡೆದು "ಎಲಾ...,ಮಗನ, ಭೀಮ್ಯಾ ಪೊಲೀಸ್ ಆಗ್ಯೇನೋ?" ಎಂದ.

ನನಗೆ ಗಾಬರಿ. ಅಧಿಕಾರಿ ತಿರುಗಿ ಹೊಡೆದ್ರೆ ಅಜ್ಜನ ಗತಿ ಏನು?

ಆದರೆ ಆತ ಹೊಡೆಯಲಿಲ್ಲ, ಇನ್ನೂ ಜೋರಾಗಿ ಅಳತೊಡಗಿದ, "ಹೊಡೀರಿ ಸರ್, ಈ ದೇಹ ನಿಮ್ಮ ಹೊಡೆತ, ಪ್ರೀತಿ ತಿಂದೇ ಮನಶ್ಯಾ ಆದದ್ದು. ನಿಮಗೆ ನೆನಪ ಅದ ಏನು ಸರ್? ನನ್ನಪ್ಪ ರಸ್ತೆ ಕಸಾ ಗುಡಸತಿದ್ದ. ನನಗೂ ಅದನ್ನೇ ಮಾಡು ಅಂದ. ಆದ್ರ ನೀವು ಮನೀಗೆ ಬಂದು ನನ್ನ ಕರಕೊಂಡು ಹೋಗಿ ಮನ್ಯಾಗ ಇಟಗೊಂಡು ಊಟಹಾಕಿ, ಸಾಲೀ ಕಲಿಸಿದ್ರಿ. ಮುಂದ, ವಿಜಾಪೂರದಾಗ ಹಾಸ್ಟೆಲ್ಗೆ ಸೇರಿಸಿದ್ರಿ. ಆವತ್ತು ನೀವು ಹಾಂಗ ಮಾಡದಿದ್ರ ನಾನು ಇನ್ನೂ ಕಸಾ ಗುಡಿಸ್ತಾನೇ ಇರತಿದ್ದೆ. ಖರೇ ಹೇಳತೀನಿ ಸರ್. ನನ್ನ ಮೈಮ್ಯಾಲಿನ ಚರ್ಮಾ ಸುಲದು ನಿಮ್ಮ ಕಾಲಿಗೆ ಚಪ್ಪಲೀ ಮಾಡಿದ್ರೂ ನನ್ನ ಋಣ ತೀರೋದಿಲ್ಲ ಸರ್" ಎಂದವನೇ ಬಿಕ್ಕುತ್ತಾ ಮತ್ತೊಮ್ಮೆ ಅಜ್ಜನ ಕಾಲಿಗೆ ಬಿದ್ದ. ಹೆಂಡತಿಯಿಂದಲೂ ನಮಸ್ಕಾರ ಮಾಡಿಸಿದ.

ಆ ಚಿತ್ರ ನನ್ನ ಮನದಲ್ಲಿ ಅಚ್ಚಳಿಯದೇ ನಿಂತಿದೆ. ಒಂದೆಡೆಗೆ ಕೃತಜ್ಞನಾದ ವಿದ್ಯಾರ್ಥಿ, ಇನ್ನೊಂದೆಡೆಗೆ ಕೃತಾರ್ಥನಾದ ಗುರು. ಇಬ್ಬರೂ ಅಳುತ್ತ ಒಬ್ಬರನ್ನೊಬ್ಬರು ಅಪ್ಪಿಕೊಂಡ ರೀತಿ, ಸಾರ್ಥಕ ಶಿಕ್ಷಕತ್ವದ ಹೆಗ್ಗುರುತು ಇದು. ಪ್ರಾಮಾಣಿಕ ಶಿಕ್ಷಕನಿಗೆ ದೊರೆತ ನೊಬೆಲ್ ಪ್ರಶಸ್ತಿ.

ಬೇಂದ್ರೆ ಕೇಳಿದಂತೆ "ಎಲ್ಲಿ ಹೋಗ್ಯಾವೋ ಗೆಳೆಯಾ ಆ ಕಾಲಾ?' ಎಂದೆನ್ನಿಸುತ್ತದೆ ನನಗೆ ಇಂದು.



**ಲೇಖಕರ ಪರಿಚಯ :**




ಶ್ರೇಷ್ಠ ಶಿಕ್ಷಣ ತಜ್ಞರಾದ ಡಾ॥ ಗುರುರಾಜ ಕರಜಗಿಯವರು ಜನಿಸಿದ್ದು ೨೪.೦೫.೧೯೫೨ರಲ್ಲಿ. ಡಾಕ್ಟರೇಟ್ ಪದವಿ ಪಡೆದ ಇವರು ಪ್ರಾಧ್ಯಾಪಕರಾಗಿದ್ದರು. ಇಪ್ಪತ್ತೆರಡಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ದೇಶವಿದೇಶದ ನಿಯತಕಾಲಿಕೆಗಳಲ್ಲಿ ಪ್ರಕಟಿಸಿದ್ದಾರೆ. ಅಂತರರಾಷ್ಟೀಯ ಸೃಜನಶೀಲ ಅಧ್ಯಾಪನಾ ಕೇಂದ್ರದ (ಎ.ಸಿ.ಟಿ) ಸ್ಥಾಪಕ ನಿರ್ದೇಶಕರಾಗಿ ನಿಯತ ಕಾಲಿಕೆಗಳಲ್ಲಿ ಇಪ್ಪತ್ತಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ಬರೆದವರು, ಅಂಕಣಕಾರರು. ಅವರ, ಪ್ರಕಟಿತ 'ಕರಣಾಳು ಬಾ ಬೆಳಕೆ' ಭಾಗ–ಮೂರರಿಂದ ಈ ಲೇಖನವನ್ನು ಆಯ್ದುಕೊಳ್ಳಲಾಗಿದೆ.

**ನಗಲು ಬರುವವನು ಮಾತ್ರ ಇತರರನ್ನು ನಗಿಸಬಲ್ಲ – ವಿಟ್‌ಮನ್.**

## ಅರ್ಥತಿಳಿಯಿರಿ

**ರೇಶನ್**=ಪಡಿತರ. **ಪರವಾನಿಗೆ**=ಅನುಮತಿ. **ಕಾಯಿದೆ**=ಕಾನೂನು. **ಗುಡುಗು**=ಜೋರಾಗಿ ಹೇಳು, ಅಬ್ಬರಿಸು. **ಸಾಹೇಬರು**=ದೊಡ್ಡ ಅಧಿಕಾರ ಹುದ್ದೆಯಲ್ಲಿರುವವರು. **ದಾಂಡಿಗ**=ಗಟ್ಟಿಮುಟ್ಟಾಗಿರುವವ. **ಕಲ್ಲೀಮೀಸೆ**=ಕೆನ್ನೆಗೂ ಹರಡಿರುವ ಮೀಸೆ, ಹುರಿಮೀಸೆ. **ದೀರ್ಘದಂಡಪ್ರಣಾಮ**=ಉದ್ದಕ್ಕೆ ಮಲಗಿ ಮಾಡುವ ನಮಸ್ಕಾರ. **ಕಪಾಳ**=ಕೆನ್ನೆ. **ಮನಶ್ಯಾ**–ಮನುಷ್ಯ. **ಸಾಲೀ**–ಶಾಲೆ. **ಖರೇ**=ಸತ್ಯ, ನಿಜ. **ಅಚ್ಚಳಿಯದೆ**=ಅಚ್ಚು ಅಳಿಯದೆ, ಮಾಸದೆ, ಮರೆಯಾಗದೆ. **ಕೃತಾರ್ಥ**=ಧನ್ಯ. **ಆಸನ**=ಕುಳಿತುಕೊಳ್ಳುವ ಪೀಠ. **ಹೆಗ್ಗುರುತು**=ಹಿರಿದು ಗುರುತು=(ಕ.ಸ)

## ಅಭ್ಯಾಸ

**I. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯದಲ್ಲಿ ಉತ್ತರ ಬರೆಯಿರಿ.**

1. ಲೇಖಕರ ಅಜ್ಜ ಯಾವ ವೃತ್ತಿಯಲ್ಲಿದ್ದರು?
2. ಸ್ವತಂತ್ರ ಭಾರತದಲ್ಲಿ ಮೊದಲಬಾರಿ ರೇಶನ್ ಪದ್ಧತಿ ಜಾರಿಗೆ ಬರಲು ಕಾರಣವೇನು?
3. ರೇಶನ್ ಪದ್ಧತಿಯ ಪ್ರಕಾರ ಏನನ್ನು ಮಾಡುವಂತಿರಲಿಲ್ಲ?
4. ಅಜ್ಜ ಕಾಯಿದೆಯನ್ನು ಮೀರಲು ಕಾರಣವೇನು?
5. ಅಜ್ಜ ಅಕ್ಕಿಯನ್ನು ತೆಗೆದುಕೊಂಡು ಹೋದದ್ದು ಹೇಗೆ?
6. ಆಗಿನ ಕಾಲದಲ್ಲಿ ಅವಮಾನಕರವಾದ ಸಂಗತಿ ಯಾವುದಾಗಿತ್ತು?
7. 'ಸಾಹೇಬ್ರನ್ನು ಬೆಟ್ಟಿ ಆಗ್ರಿ' ಎಂದು ಹೇಳಿದ ಕೂಡಲೆ ಅಜ್ಜ ಕುಸಿದುಹೋದುದೇಕೆ?
8. ಲೇಖಕರ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತ ಚಿತ್ರ ಯಾವುದು?
9. ಅಜ್ಜನು ಸಾಹೇಬರ ಕಪಾಳಕ್ಕೆ ಹೊಡೆದದ್ದು ಏಕೆ?
10. ಇದುವರೆಗೂ ಯಾರಿಗೂ ನಮಸ್ಕರಿಸದ ಸಾಹೇಬರು ಅಜ್ಜನಿಗೆ ನಮಸ್ಕರಿಸಿದುದೇಕೆ?

**II. ಈ ಪ್ರಶ್ನೆಗಳಿಗೆ ಮೂರು-ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1. ಅಜ್ಜ ಮಾಡಿದ ತಪ್ಪು ಯಾವುದು?
2. 'ತಪ್ಪಾತರೀ ಸಾಹೇಬರ' ಎಂದು ಅಜ್ಜ ಹೇಳಿದ್ದು ಏಕೆ?
3. "ಇನ್ನೂ ಹೊಡೀರಿ ಸರ್" ಎಂದು ಪೊಲೀಸ್ ಅಧಿಕಾರಿ ಹೇಳಿದುದೇಕೆ ?
4. "ಎಲ್ಲಿ ಹೋಗ್ಯಾವೋ ಗೆಳೆಯ ಆ ಕಾಲ" ಎಂಬ ಮಾತು ಲೇಖಕರಿಗೆ ನೆನಪಾಗಲು ಕಾಣವೇನು?
5. ಅಜ್ಜನ ಆದರ್ಶ ಗುಣ ಯಾವುದಾಗಿತ್ತು?
6. ಅಜ್ಜನು ಸಾಹೇಬರ ಕಪಾಳಕ್ಕೆ ಹೊಡೆದದ್ದು ಸರಿಯೇ? ನಿಮ್ಮ ನಿರ್ಧಾರಕ್ಕೆ ಕಾರಣ ನೀಡಿ.

**ಮಕ್ಕಳನ್ನು ಉತ್ಸಾಹದಲ್ಲಿರುವಂತೆ ನೋಡಿಕೊಳ್ಳುವುದೇ ಅವರಿಗೆ ನೀಡುವ ಉತ್ತಮ ಉಡುಗೊರೆ-ಬ್ರೂಸ್ ಬಾರ್ಟನ್.**

**III. ಸಂದರ್ಭದೊಂದಿಗೆ ವಿವರಿಸಿ.**

1. ನನಗೂ ಅದನ್ನೇ ಮಾಡು ಅಂದ
2. ಅಷ್ಟು ದೊಡ್ಡ ಮನೆಯನ್ನು ನಾನು ಕಂಡಿರಲೇ ಇಲ್ಲ
3. ಅವತ್ತು ನೀವು ಹಾಂಗ ಮಾಡದಿದ್ರ ನಾನು ಇನ್ನೂ ಕಸಾ ಗುಡಿಸ್ತಾನೇ ಇರತಿದ್ದೆ.
4. ಸಾರ್ಥಕ ಶಿಕ್ಷಕತ್ವದ ಹೆಗ್ಗುರುತು ಇದು.
5. "ಎಲ್ಲಿ ಹೋಗ್ಯಾವೋ ಗೆಳೆಯಾ ಆ ಕಾಲ"?

**IV. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1. ಅಜ್ಜನು ಸಾಹೇಬರ ಮನೆಗೆ ಹೋಗಬೇಕಾಗಿ ಬಂದ ಘಟನೆಯನ್ನು ವಿವರಿಸಿ.
2. ಪ್ರಾಮಾಣಿಕ ಶಿಕ್ಷಕನಿಗೆ ದೊರೆತ ಗೌರವವು ನೊಬೆಲಿಗೆ ಸಮಾನ ಎನಿಸಿದ್ದು ಹೇಗೆ? ವಿವರಿಸಿ.

## ಭಾಷಾಭ್ಯಾಸ

**1. ಕೆಳಗಿನ ಪದಗಳನ್ನು ವಿಂಗಡಿಸಿ ಸಂಧಿ ಹೆಸರಿಸಿ**

ಗಾಬರಿಯಿಂದ, ಅದನ್ನೊಂದು, ಇಚ್ಛೆಯಾಗಿತ್ತು, ಬಲಗೈ.

**2. ಇವುಗಳಿಗೆ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ**

ಕೃತಜ್ಞ, ಬಡತನ, ಅಪರಾಧಿ, ಪ್ರಾಮಾಣಿಕ, ಮಾನ, ಕೆಳಗೆ

**3. ಕೆಳಗಿನ ಪದಗಳಿಗೆ ಸಂಸ್ಕೃತ–ತದ್ಭವ ರೂಪಗಳನ್ನು ಬರೆಯಿರಿ**

ಆಶ್ಚರ್ಯ, ಸಕ್ಕರೆ, ಅಜ್ಜ, ಋಣ.

**4. ಈ ಪದಗಳಿಗೆ ಗ್ರಾಂಥಿಕರೂಪ ಬರೆಯಿರಿ**

ಭೆಟ್ಟಿ ಆಗ್ರಿ, ತಪ್ಪಾತರೀ, ಮನಶ್ಯಾ, ಸಾಲಿಕಲಿಸಿ, ಮನ್ಯಾಗಿದ್ದು, ಹೋಗ್ಯಾವೋ.

**5. ಮೊದಲೆರಡು ಪದಗಳನ್ನು ಓದಿಕೊಂಡು ಅದರಂತೆ ಮೂರನೆಯ ಪದಕ್ಕೆ ಸಂಬಂಧಿಸಿದ ನಾಲ್ಕನೆಯ ಪದವನ್ನು ಬರೆಯಿರಿ.**

1. ಪೋಲಿಸ್: ಆರಕ್ಷಕ ; ರೇಶನ್ : ________________
2. ಹಾಂಗ್: ಹಾಗೆ ; ಮಾಡದಿದ್ರ : ________________
3. ಬಿಜಾಪುರ : ನಾಮಪದ ; ಹೋದೆವು : ________________
4. ತಪಾತರಿ : ಲೋಪಸಂಧಿ ; ಅಕ್ಕಿಯನ್ನು : ________________
5. ಕೋಣೆಯಲ್ಲಿ : ಸಪ್ತಮೀ ವಿಭಕ್ತಿ ; ಬಂಗಲೆಯ : ________________

**ನೀನು ಭವಿಷ್ಯದ ಬಗ್ಗೆ ಯೋಚಿಸದಿದ್ದರೆ ನಿನಗೆ ಭವಿಷ್ಯವೇ ಇರಲಾರದು – ಗಾಲ್ಸ್‌ವರ್ದಿ.**

## ಚಟುವಟಿಕೆ

1. ಆದರ್ಶ ಶಿಷ್ಯ ಏಕಲವ್ಯನ ಕತೆಯನ್ನು ಓದಿ ಅದನ್ನು ಸಂಕ್ಷಿಪ್ತವಾಗಿ ಬರೆಯಿರಿ.
2. ಏಕಲವ್ಯನ ಕತೆಯನ್ನು ರೂಪಕವನ್ನಾಗಿ ಪರಿವರ್ತಿಸಿ, ಅಭಿನಯಿಸಿ.
3. 'ನಾನು ಮೆಚ್ಚಿದ ಶಿಕ್ಷಕ' ಈ ಬಗ್ಗೆ ಒಂದು ಪ್ರಬಂಧ ಬರೆದು ತರಗತಿಯಲ್ಲಿ ಓದಿರಿ. ಅದನ್ನು ಶಾಲಾಭಿತ್ತಿ ಪತ್ರಿಕೆಯಲ್ಲೂ ಪ್ರದರ್ಶಿಸಿ.
4. 'ಆದರ್ಶ ಶಿಷ್ಯ' ಈ ಬಗ್ಗೆ ನಿಮ್ಮ ನಿಮ್ಮಲ್ಲಿ ಚರ್ಚಿಸಿ ಒಂದು ಪ್ರಬಂಧವನ್ನು ಬರೆಯಿರಿ.

## ವ್ಯಾಕರಣಾಂಶ

**ಅವ್ಯಯಗಳು:** ನಾಮ ಪ್ರಕೃತಿಗೆ ನಾಮವಿಭಕ್ತಿ ಪ್ರತ್ಯಯಗಳೂ (ಮನೆ+ಅನ್ನು, ಮನೆ+ಅಲ್ಲಿ), ಕ್ರಿಯಾ ಪ್ರಕೃತಿಗೆ ಆಖ್ಯಾತ ಪ್ರತ್ಯಯಗಳೂ ಸೇರುತ್ತದೆ. (ನೋಡು+ಅನು, ಕೇಳು+ಎವು). ವಾಕ್ಯವು ಪೂರ್ಣರೂಪದ್ದಾಗಬೇಕಾದರೆ ಲಿಂಗ ಅಥವಾ ಧಾತುಗಳಿಗೆ ಪ್ರತ್ಯಯಗಳು ಸೇರಿರಲೇಬೇಕು. ಆದರೆ ಕೆಲವೊಂದು ಶಬ್ದಗಳಿಗೆ ಯಾವುದೇ ಪ್ರತ್ಯಯವು ಸೇರದೆ ಯಥಾಸ್ಥಿತಿಯಲ್ಲಿಯೇ ಲಿಂಗ, ವಚನ, ಕಾಲಭೇದಗಳಿಲ್ಲದೆ ಇದ್ದುಬಿಡುವುದುಂಟು. ಅವುಗಳನ್ನು, ಸೇರಲು ನಿರ್ದಿಷ್ಟ ಪ್ರತ್ಯಯಗಳಿಲ್ಲದ ಪದಗಳೆಂದು ಹೇಳಬಹುದು. ಉದಾ–ಫಕ್ಕನೆ, ಪಟಪಟನೆ, ಅಯ್ಯೋ, ಹೌದು, ಹೇಗೆ, ಏಕೆ, ನೆಟ್ಟಗೆ, ಮೆಲ್ಲಗೆ– ಇಂತಹವು. ಇಂತಹ ಪದಗಳು ಮೂರೂ ಲಿಂಗಗಳಲ್ಲಿ ಹಾಗೂ ಕಾಲಗಳಲ್ಲಿ ಮತ್ತು ಎರಡೂ ವಚನಗಳಲ್ಲಿ– ಏಕೆ ಬಂದಳು, ಏಕೆ ಬಂದರು, ಏಕೆ ಬಂದನು, ಏಕೆ ಬರುವರು, ಏಕೆ ಬರುತ್ತೀ– ಎಂದು ಪ್ರಯೋಗಗೊಳ್ಳುತ್ತವೆ. ಆದುದರಿಂದ ವ್ಯಯಗೊಳ್ಳದ ಪದಗಳೆಂಬ ಅರ್ಥದಲ್ಲಿ ಅವು 'ಅವ್ಯಯ' ಎಂದು ಕರೆಸಿಕೊಳ್ಳುತ್ತವೆ.

ಆಶ್ಚರ್ಯದ ಭಾವನೆಗಳನ್ನು ವ್ಯಕ್ತಪಡಿಸುವಲ್ಲಿ (ಅಬ್ಬಾ, ಎಲವೋ) ಸಂಬಂಧ ವಾಚಕಗಳಲ್ಲಿ (ಅಂತೆ, ವರೆಗೆ, ತನಕ, ಓಲ್) ಅನುಕರಣೆಯಲ್ಲಿ (ಒಯ್ಯನೊಯ್ಯನೆ, ಧಗಧಗ, ಬೇಗಬೇಗ) ಪ್ರಶ್ನೆಯಲ್ಲಿ (ಹೇಗೆ, ಎಲ್ಲಿಗೆ) ಇಂತಹವು ಅವ್ಯಯಗಳಾಗಿವೆ.



## ದ್ವಿರುಕ್ತಿ, ಜೋಡುನುಡಿ–ನುಡಿಗಟ್ಟು (ಪಡೆನುಡಿ)

ವಾಕ್ಯದಲ್ಲಿ ಪದವನ್ನು ಜೋಡಿಸುವ ಜಾಣ್ಮೆಯೇ ಶೈಲಿ. ಪದಗಳ ಆಯ್ಕೆಯಲ್ಲಿ, ಜೋಡಣೆಯಲ್ಲಿ ಕೌಶಲ ಇದ್ದಾಗ ಶೈಲಿ ಸುಂದರವಾಗುತ್ತದೆ. ಸಹಜ–ಸ್ವಾಭಾವಿಕ ಪದಗಳೊಂದಿಗೆ ಮತ್ತೊಂದು ಪದವನ್ನು ಜೋಡಿಸಿ ವಿಶಿಷ್ಟ ಅರ್ಥಬರುವಂತೆ ಮಾಡಿಕೊಳ್ಳಲಾಗುತ್ತದೆ. ಅಂತಹ ಪದಗಳ ಜೋಡಣೆಯಲ್ಲಿ ಕೆಲವು ದ್ವಿರುಕ್ತಿಗಳಾಗುತ್ತವೆ, ಇನ್ನು ಕೆಲವು ಜೋಡುನುಡಿಗಳಾಗುತ್ತವೆ. ಮತ್ತೆ ಕೆಲವು ನುಡಿಗಟ್ಟು ಅಥವಾ ಪಡೆನುಡಿಗಳೆನ್ನಿಸಿಕೊಳ್ಳುತ್ತವೆ.

**ದ್ವಿರುಕ್ತಿ:** ಹೌದು ಹೌದು, ಮನೆ ಮನೆ, ನಿಲ್ಲುನಿಲ್ಲು, ಬನ್ನಿ ಬನ್ನಿ, ಬೇಡಬೇಡ, ಓಡುಓಡು, ಹಣ್ಣುಹಂಪಲು ಇತ್ಯಾದಿಗಳಲ್ಲಿ ಒಂದೇ ಪದ ಎರಡು ಸಾರಿ ಬಂದು ದ್ವಿರುಕ್ತಿ ಎನ್ನಿಸಿಕೊಳ್ಳುತ್ತದೆ. ಉತ್ಸಾಹ, ಅವಸರ, ದುಃಖ,

**ದಡ್ಡನ ಜೊತೆಯಲ್ಲಿ ಚರ್ಚಿಸುವುದು ಕುರುಡನ ಮುಂದೆ ದೀಪ ಹಿಡಿದಂತೆ – ಡಿ.ಗ್ಯಾಸ್ಟನ್.**

ಇತ್ಯಾದಿ ಭಾವನೆಗಳ ತೀವ್ರತೆಯನ್ನು ಹೇಳುವಲ್ಲಿ ಇವನ್ನು ಬಳಸಲಾಗುತ್ತವೆ. ಕೆಲವೊಮ್ಮೆ ಇಂತಹ ಸಂದರ್ಭದಲ್ಲಿ ಮೊದಲ ಪದ ರೂಪಾಂತರಗೊಳ್ಳುವುದುಂಟು.

ಕಡೆಗೆ ಕಡೆಗೆ – ಕಟ್ಟಕಡೆಗೆ, ಮೊದಲು ಮೊದಲು–ಮೊತ್ತಮೊದಲು, ಕೆಳಗೆ ಕೆಳಗೆ–ಕೆಳಕೆಳಗೆ, ಹೊಸದುಹೊಸದು–ಹೊಚ್ಚಹೊಸದು–ಹೀಗೆ.

**ಜೋಡುನುಡಿ**–ದ್ವಿರುಕ್ತಿಯಲ್ಲಿ ಒಂದೇಪದದ ಪುನರಾರ್ತನೆಯಾದರೆ ಜೋಡುನುಡಿಯಲ್ಲಿ ಹಾಗಿರದು. ಅದೇ ಅರ್ಥದ ಇನ್ನೊಂದು ಪದವಾಗಲಿ, ಅರ್ಥ ಇಲ್ಲದಿದ್ದರೂ ಮೊದಲ ಪದದ ರೂಪಕ್ಕೆ ಸಮವಾದ ಬೇರೊಂದು ಪದವಾಗಲೀ, ವಿರುದ್ಧಾರ್ಥಕ ಪದವಾಗಲೀ ಇರುತ್ತದೆ. ಇಂತಹ ಭಾಷೆಯ ಬಳಕೆಯಿಂದ ಅರ್ಥಸೌಂದರ್ಯ ಹೆಚ್ಚುತ್ತದೆ.

ಉಡುವಂತಹುದು ತೊಡುವಂತಹುದು ಉಡಿಗೆತೊಡಿಗೆ. ಹಾಗೆಯೇ ಅವಳಿಜವಳಿ, ನೆರೆಹೊರೆ, ಕಾಳುಕಡ್ಡಿ (ಅರ್ಥ ಒಂದೇ, ಪದಗಳು ಮಾತ್ರ ಬೇರೆ) ಮಕ್ಕಳುಮರಿ, ರೀತಿನೀತಿ; ಆಚಾರವಿಚಾರ, ಕಟ್ಟುಕಟ್ಟಳೆ, ಗಿಡಗಂಟೆ, ನಡೆನುಡಿ, ನೋವುನಲಿವು, ಆದಿಅಂತ್ಯ, ಕನಸುನನಸು, ಪಂಡಿತಪಾಮರ, ಸಿಹಿಕಹಿ, ಅಡ್ಡಾದಿಡ್ಡಿ, ಕೂಲಿನಾಲಿ, ಹುಳುಹುಪ್ಪಟೆ ಇತ್ಯಾದಿ.

**ಪಡೆನುಡಿ–ನುಡಿಗಟ್ಟು:** ಪ್ರತ್ಯೇಕ ಅರ್ಥದ ಪದಗಳೆರಡು ಸೇರಿದಂಥವು, ಅಥವ ಕೆಲವು ವಿಶೇಷ ಅರ್ಥವನ್ನು ಕೊಡುವಂಥವು ಈ ವರ್ಗದವು. ಅದು ಪದಗಳ ವಾಸ್ತವ ಅರ್ಥವನ್ನು ಮೀರಿರುತ್ತದೆ. ಉದಾ: ಕತ್ತಿಮಸೆ–ದ್ವೇಷಸಾಧಿಸು, ಕೈಕೊಡು–ಮೋಸ ಮಾಡು, ರಾಮಬಾಣ–ಸೋಲದಿರುವುದು, ಪರಿಣಾಮಕಾರಿಯಾದುದು, ಹೊಂಚುಹಾಕು–ಸಮಯ ಸಾಧಿಸು, ಆಕಾಶಪಾತಾಳ ಒಂದು ಮಾಡು–ಮೇಲೆಕೆಳಗೆ ಮಾಡು. ಈ ಮೊದಲಾದವು.





**ಮೂರ್ಖನ ಹೃದಯ ಬಾಯಲ್ಲಿದ್ದರೆ ಜಾಣನ ಬಾಯಿ ಹೃದಯದಲ್ಲಿರುತ್ತದೆ – ಬೆಂಜಮಿನ್ ಫ್ರಾಂಕ್ಲಿನ್.**

# ಗದ್ಯಪಾಠ – ೦೬
# ಶಿಷ್ಯವತ್ಸಲ ರಾಮನ್

– ಬಿ.ಪಿ. ರಾಧಾಕೃಷ್ಣ

**ಪಾಠ ಪ್ರವೇಶ:** ಶಿಕ್ಷಣದ ಸಾರ್ಥಕ್ಯವನ್ನು ಜ್ಞಾನಾರ್ಜನೆಯ ಪ್ರಮಾಣದಿಂದ ಅಳೆಯಲಾಗುತ್ತಿರುವ ಈ ಕಾಲದಲ್ಲಿ ಅದಕ್ಕೆ ಹೊರತಾದುದನ್ನು ಆಲೋಚಿಸಬೇಕಾಗಿದೆ. ಇಲ್ಲಿ ಜ್ಞಾನವಷ್ಟೇ ಮುಖ್ಯವಲ್ಲ; ಅದನ್ನು ಗಳಿಸುವ ಮಾರ್ಗವೂ ಶುದ್ಧವಾಗಿರಬೇಕು. ಅದರಿಂದ ಗಳಿಸಿದ ಜ್ಞಾನವನ್ನು ಸೂಕ್ತ ಎಡೆಯಲ್ಲಿ, ಸರಿಯಾದ ಕಾಲದಲ್ಲಿ ಅಳವಡಿಸುವ ಚಾಕಚಕ್ಯತೆಯೂ ಇರಬೇಕು. ಅದಾಗುವುದು, ವಿಷಯವು ಮನಸ್ಸನ್ನು ತುಂಬಿಕೊಂಡಾಗ ಮತ್ತು ಅದರ ನಿರಂತರ ಮಂಥನದಿಂದ. ಸ್ವಾರ್ಥ ಹಾಗೂ ಪಕ್ಷಪಾತವಿಲ್ಲದೆ ನಿರಂತರವಾಗಿ ಮಾರ್ಗದರ್ಶನ ನೀಡುತ್ತ, ಶಿಷ್ಯನನ್ನು ಬೆಳೆಸಿ ಗುರಿಮುಟ್ಟಿಸುವ ಗುರುಗಳು ಇಂದು ಬೇಕು. ಹೆಚ್ಚಿನ ಸಂಶೋಧನೆಗೆ ತೊಡಗುವ ಆಕಾಂಕ್ಷಿಗಳಲ್ಲಿ ಯೋಗ್ಯರನ್ನಷ್ಟೇ ಆಯ್ಕೆ ಮಾಡುವ ಗುಣಗ್ರಾಹಿಗಳುಬೇಕು. ಆಯ್ಕೆಯಲ್ಲಿ ಪಾರದರ್ಶಕತೆ, ಬೆನ್ನುತಟ್ಟಿ ಪ್ರೋತ್ಸಾಹಿಸುವುದು, ನಿರಾಸೆ ಕವಿಯದಂತೆ ಎಚ್ಚರ ವಹಿಸುವುದು. ಇವೆಲ್ಲವೂ ಬಹುಮುಖ್ಯ. ಗುರುಗಳ ಕಣ್‌ಕಾವಲಲ್ಲಿ ಅಭ್ಯಾಸಮಾಡುವ ಶಿಷ್ಯರಿಗೆ ಸಂಪೂರ್ಣ ಕಲಿಕೆಯ ಬದ್ಧತೆಯೂ ಅಗತ್ಯ. ಈ ಎರಡನ್ನೂ ಒಳಗೊಂಡ, ನೊಬೆಲ್ ಪ್ರಶಸ್ತಿ ಪುರಸ್ಕೃತ ಸರ್ ಸಿ.ವಿ. ರಾಮನ್‌ರ ಶಿಷ್ಯವಾತ್ಸಲ್ಯದ ವಿಹಂಗಮ ನೋಟ ಇಲ್ಲಿದೆ.



ತಮ್ಮ ಬಳಿ ಶಿಷ್ಯವೃತ್ತಿಯನ್ನು ಕೈಗೊಳ್ಳಲು ಯಾರೇ ಬರಲಿ ಅವರನ್ನು ರಾಮನ್ ಕಠಿಣ ಪರೀಕ್ಷೆಗೆ ಒಳಪಡಿಸುತ್ತಿದ್ದರು. ಕಾಲೇಜು ಪರೀಕ್ಷೆಗಳಲ್ಲಿ ಗಳಿಸಿದ ಅಂಕ ಅವರಿಗೆ ಮುಖ್ಯವಾಗಿರುತ್ತಿರಲಿಲ್ಲ. ವಿದ್ಯಾರ್ಥಿಯು ವಿಷಯವನ್ನು ಚೆನ್ನಾಗಿ ತಿಳಿದುಕೊಂಡಿದ್ದಾನೆಯೇ, ಅವನ ಬುದ್ಧಿ ಹರಿತವಾಗಿದೆಯೇ, ಅವನಲ್ಲಿ ಉತ್ಸಾಹ ತುಂಬಿದೆಯೇ, ಕಷ್ಟಪಟ್ಟು ಕೆಲಸ ಮಾಡುವ ದೃಢನಿಶ್ಚಯ ಅವನಲ್ಲಿ ಕಾಣುವುದೇ ಎಂದೆಲ್ಲ ಒರೆಹಚ್ಚಿ ನೋಡಿ, ಅವನನ್ನು ಪ್ರಶ್ನಿಸಿ ಅವನ ತೂಕ ಎಷ್ಟೆಂದು ಗುರುತಿಸಿ, ಶಿಷ್ಯನನ್ನಾಗಿ ಆರಿಸುತ್ತಿದ್ದರು. ಯಾರೊಬ್ಬರ ಶಿಫಾರಸನ್ನು ನಂಬಿಕೊಂಡು ಆಯ್ಕೆ ಮಾಡುತ್ತಿರಲಿಲ್ಲ.

ಶಿಷ್ಯನನ್ನು ಆರಿಸಿಕೊಂಡ ಮೇಲೆ ಅವನಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟು, ಅವನನ್ನು ಮಗನಿಗಿಂತ ಹೆಚ್ಚಾಗಿ ನೋಡಿಕೊಳ್ಳುತ್ತಿದ್ದರು. ತಮ್ಮ ಶಿಷ್ಯರೂ ತಮ್ಮಂತೆಯೇ ವಿಜ್ಞಾನದ ಅಭ್ಯಾಸಿಗಳು, ತಮ್ಮ ನಡುವೆ ಮೇಲು ಕೀಳೆಂಬ ತಾರತಮ್ಯವಿರಕೂಡದು, ವಿಜ್ಞಾನದ ಅನ್ವೇಷಣಕಾರ್ಯದಲ್ಲಿ ನಾವೆಲ್ಲ ಸರಿಸಮಾನರಾದ ಕೆಲಸಗಾರರು ಎಂದು ಭಾವಿಸಿದ್ದರು. ಅದರಂತೆಯೇ ನಡೆದುಕೊಳ್ಳುತ್ತಿದ್ದರು. ಶಿಷ್ಯರು ನಡೆಸುವ ಸಂಶೋಧನೆ ಅತ್ಯುತ್ತಮ ವರ್ಗದ್ದಾಗಿರಬೇಕು, ಇತರರನ್ನು ಸುಮ್ಮನೆ ಅನುಕರಿಸುವುದು ಸರ್ವಥಾ ಕೂಡದು, ಸ್ವಂತಿಕೆ ಇರಬೇಕು, ಹೊಸ ದಾರಿಯನ್ನು ಗುರುತಿಸಿ ಮುಂದುವರಿಯಬೇಕು ಎಂದು ಒತ್ತಿ ಒತ್ತಿ ಹೇಳುತ್ತಿದ್ದರು. ಬೆಳಗ್ಗೆ ಪ್ರಯೋಗಾಲಯಕ್ಕೆ ಬಂದಕೂಡಲೆ ಒಂದು ಸುತ್ತು ಹೊರಟು ಎಲ್ಲ ಭಾಗಗಳಿಗೂ ಭೇಟಿಯಿತ್ತು, ಪ್ರತಿಯೊಬ್ಬ ಶಿಷ್ಯನೂ ಏನು ಮಾಡುತ್ತಿದ್ದಾನೆ, ಕೆಲಸದಲ್ಲಿ ಅವನ ಪ್ರಗತಿ ಎಷ್ಟು ಎಂದು ವಿಚಾರಿಸುತ್ತಿದ್ದರು. ಮುಂದೆ ಏನು ಮಾಡಬೇಕೆನ್ನುವ ವಿಷಯವಾಗಿ ಸಲಹೆಗಳನ್ನು ಕೊಡುತ್ತಿದ್ದರು. ಶಿಷ್ಯನೇನಾದರೂ ಹೊಸ

**ದುರ್ಬಲರು ಅವಕಾಶಗಳಿಗಾಗಿ ಕಾಯುತ್ತಾರೆ ; ಶಕ್ತಿವಂತರು ಅವಕಾಶಗಳನ್ನು ಸೃಷ್ಟಿಮಾಡುತ್ತಾರೆ – ಮಾರ್ಡನ್.**

ವಿಷಯವೊಂದನ್ನು ಬಯಲಿಗೆ ತಂದಿದ್ದನೆಂದರೆ, ಬೆನ್ನುತಟ್ಟಿ, ಅವನನ್ನು ಎಲ್ಲರ ಎದುರಿಗೂ ಹೊಗಳಿ ಅಟ್ಟಕ್ಕೇರಿಸುತ್ತಿದ್ದರು. ಶಿಷ್ಯರು ಗುರುವಿನ ಕೊಂಡಾಟದಿಂದ ಉಬ್ಬಿಹೋಗುತ್ತಿದ್ದರು. ಸಂಶೋಧನೆಗಳನ್ನು ಮತ್ತಷ್ಟು ಹುರುಪಿನಿಂದ ಮುಂದುವರಿಸುತ್ತಿದ್ದರು.

ಶಿಷ್ಯರು ತಾವು ಕಂಡುಹಿಡಿದ ವಿಷಯಗಳನ್ನು ಇತರರಿಗೆ ಮನದಟ್ಟಾಗುವಂತೆ ತಿಳಿಸುವ ಸಾಮರ್ಥ್ಯವನ್ನು ಪಡೆದಿರಬೇಕು ಎನ್ನುವುದು ರಾಮನ್ ಅವರ ಆಶಯವಾಗಿತ್ತು. ಅದಕ್ಕಾಗಿಯೇ ವಾರವಾರವೂ ವ್ಯಾಸಂಗ ಗೋಷ್ಠಿ (Seminar) ಗಳನ್ನು ಏರ್ಪಡಿಸುತ್ತಿದ್ದರು. ಶಿಷ್ಯರನ್ನು ಪುನಃ ಪುನಃ ಪ್ರಶ್ನಿಸಿ, ಅವರಲ್ಲಿ ಹುದುಗಿರುವ ಶಕ್ತಿ ಹೊರಬರುವಂತೆ ಮಾಡುತ್ತಿದ್ದರು. ಶಿಷ್ಯರೊಂದಿಗೆ ವೈಜ್ಞಾನಿಕ ವಿಷಯವಲ್ಲದೆ ಬೇರೆ ವಿಷಯದ ಪ್ರಸ್ತಾಪ ಮಾಡುತ್ತಿರಲಿಲ್ಲ. ರಾಮನ್ ಅವರಂತೆ ಶಿಷ್ಯರ ಅಭಿವೃದ್ಧಿಗಾಗಿ ನಿರ್ವಂಚನೆಯಿಂದ ದುಡಿದ ಗುರುಗಳು ಅತಿ ವಿರಳ. ಅವರು ಹಾಕಿಕೊಟ್ಟ ಮೇಲ್ಪಂಕ್ತಿ ವಿಜ್ಞಾನ ವಿಷಯದ ಬೋಧಕರೆಲ್ಲರಿಗೂ ಆದರ್ಶವಾಗಬಲ್ಲದ್ದು. "ವಾಸ್ತವವಾಗಿ ವಿಜ್ಞಾನ ಎಂದರೆ ಭಾವನೆಗಳು, ಅವು ಮನಸ್ಸಿನಲ್ಲಿ ಗಸ್ತುತಿರುಗುತ್ತಿರಬೇಕು. ಪಠ್ಯಪುಸ್ತಕಗಳಲ್ಲಾಗಲಿ, ಯಂತ್ರೋಪಕರಣಗಳಲ್ಲಾಗಲಿ ಜ್ಞಾನ ಅಡಗಿರುವುದಿಲ್ಲ" ಎಂದು ಅವರು ಹೇಳುತ್ತಿದ್ದರು.

ಶಿಷ್ಯರಿಗೆ ಎಲ್ಲಿ ಗೌರವ ಸಲ್ಲಬೇಕೊ, ಆ ವಿಷಯದಲ್ಲಿ ಬಹಳ ಎಚ್ಚರಿಕೆ ವಹಿಸುತ್ತಿದ್ದರು. ಅವರುಗಳು ಬರೆದು ತಂದ ಲೇಖನಗಳನ್ನು ತಿದ್ದುತ್ತಿದ್ದರು. ಮತ್ತೆ ಮತ್ತೆ ತಿದ್ದಿಸುತ್ತಿದ್ದರು. ಹೀಗೆ ಐದಾರು ಸಲ ತಿದ್ದಿಯಾದ ಮೇಲೆಯೇ ಪ್ರಕಟನೆಗೆ ಯೋಗ್ಯವೆಂದು ಒಪ್ಪಿ ಆ ಉತ್ತಮ ಪ್ರಬಂಧವನ್ನು ಶಿಷ್ಯನ ಹೆಸರಿನಲ್ಲಿ ಪ್ರಕಟಣೆಗೆ ಕಳುಹಿಸುತ್ತಿದ್ದರು.

ತಮ್ಮ ಶಿಷ್ಯರಲ್ಲಿ ಯಾರಿಗೂ ನೇರವಾಗಿ ಪ್ರಶಸ್ತಿಪತ್ರವನ್ನು ಅವರು ಕೊಡುತ್ತಿರಲಿಲ್ಲ. ಆದರೆ ಅವರನ್ನು ನೇಮಕಮಾಡಿಕೊಳ್ಳಬೇಕೆಂದಿರುವ ಸಂಸ್ಥೆಯ ಅಧಿಕಾರಿಗಳಿಗೆ ಪತ್ರಬರೆದು ಶಿಷ್ಯನ ಪ್ರತಿಭೆಯನ್ನು ಕೊಂಡಾಡಿ ಅವನಿಗೆ ಆ ಸ್ಥಾನ ಸಿಕ್ಕುವಂತೆ ಮಾಡುತ್ತಿದ್ದರು. ಇದು ರಾಮನ್ ಅವರಲ್ಲಿದ್ದ ಬಹು ದೊಡ್ಡ ಗುಣ.



ಅವರಲ್ಲಿ ಶಿಷ್ಯವೃತ್ತಿಯನ್ನು ಮಾಡಿದವರು ಭೌತಶಾಸ್ತ್ರ ವಿಭಾಗಕ್ಕೆ ಮಾತ್ರ ಸೇರಿದವರಾಗಿರಲಿಲ್ಲ. ಅವರಲ್ಲಿ ಗಣಿತತಜ್ಞರಿದ್ದರು, ರಸಾಯನಶಾಸ್ತ್ರದವರಿರುತ್ತಿದ್ದರು, ಭೂವಿದ್ಯೆಯ ಶಿಷ್ಯರೂ ಅವರಲ್ಲಿ ಕೆಲಸ ಮಾಡುತ್ತಿದ್ದರು. ಪ್ರತಿಯೊಬ್ಬರಿಗೂ ಅವರವರು ಏನು ಮಾಡಬೇಕು, ಸಂಶೋಧನೆಯಲ್ಲಿ ಯಾವ ರೀತಿ ಮುಂದುವರಿಯಬೇಕು ಎನ್ನುವ ವಿಷಯವಾಗಿ ಅವರಿಂದ ಸಲಹೆ ಸಿಕ್ಕುತ್ತಿತ್ತು. ಸೆಮಿನಾರ್‌ಗಳಲ್ಲಿ ಶಿಷ್ಯರಾದವರು ತಾವು ಮಾಡುತ್ತಿದ್ದ ಸಂಶೋಧನೆಗಳ ವಿವರವನ್ನು ತಿಳಿಸಬೇಕಾಗುತ್ತಿತ್ತು. ಸಂಶೋಧನೆ ನಡೆಸುವಾಗ ತಮಗೆ ತೋರಿದ ಸಂದೇಹಗಳನ್ನು ಪ್ರಸ್ತಾಪಿಸಬೇಕಾಗಿತ್ತು. ಇಂಥ ಸೆಮಿನಾರ್‌ಗಳಲ್ಲಾವುದನ್ನೂ ರಾಮನ್ ತಪ್ಪಿಸಿಕೊಳ್ಳುತ್ತಿರಲಿಲ್ಲ. ಮೈಯೆಲ್ಲ ಕಿವಿಯಾಗಿ, ಶಿಷ್ಯರು ಕೊಟ್ಟ ಪ್ರತಿ ವಿವರವನ್ನೂ ಗ್ರಹಿಸುತ್ತಿದ್ದರು. ಸಂದೇಹ ಪರಿಹಾರ ಮಾಡಲು ತಮ್ಮದೇ ಸಲಹೆಗಳನ್ನು ಕೊಡುತ್ತಿದ್ದರು. ಅವರ ಪ್ರಖರವಾದ ಬುದ್ಧಿ ಅನೇಕ ಹಂತಗಳನ್ನು ದಾಟಿ, ಒಂದು ಬಗೆಯ ಒಳ ಅರಿವಿನ (intuition ) ಬಲದಿಂದ ಹೊಸ ಗುರಿಯೊಂದರತ್ತ ಹಾರುತ್ತಿತ್ತು. ಈ ಅದ್ಭುತ ಶಕ್ತಿಯನ್ನು ಕಂಡೇ Max Born ಪಂಡಿತ– 'Raman's mind leaps over mathematics' ಎಂದು ಉದ್ಗರಿಸಿದ್ದು, 'ವಾದೇ ವಾದೇ ಜಾಯತೇ ತತ್ತ್ವಬೋಧಃ' ಇದು ಆ ಚರ್ಚಾಕೂಟಗಳ ಹಿಂದಿನ ಮುಖ್ಯ ಸೂತ್ರ.. ಗುರುವಿಗೆ ಪರಿಪ್ರಶ್ನೆಸೇವೆಯನ್ನು ಸಲಿಗೆ ಗೌರವಗಳಿಂದ ಹೀಗೆ ಶಿಷ್ಯರೆಲ್ಲ ಸಲ್ಲಿಸುತ್ತಿದ್ದರು. ಸೆಮಿನಾರುಗಳಲ್ಲಿ

**ಯಾವಾಗ ಮೌನದಿಂದಿರಬೇಕೆಂಬುದನ್ನು ತಿಳಿಯದವನಿಗೆ ಯಾವಾಗ ಮಾತನಾಡಬೇಕೆಂಬುದೂ ತಿಳಿಯುವುದಿಲ್ಲ– ಪಿ.ಸೈರಸ್.**

ಗುರುಶಿಷ್ಯರ ನಡುವೆ ನಡೆದ ವಾದ ವಿವಾದಗಳು ಹೊಸ ತತ್ತ್ವವೊಂದನ್ನು ಹೊರಗೆಡುಹುವುದರಲ್ಲಿ ಯಶಸ್ವಿಯಾಗುತ್ತಿದ್ದವು. 'ನನ್ನ ಮನಸ್ಸಿಗೆ ಹಾಗೆ ತೋರುತ್ತದೆ. ಇದನ್ನೇ ಗುಣಿಸಿ ನೋಡು' ಎಂದು ತಮ್ಮ ಶಿಷ್ಯರಲ್ಲಿ ಗಣಿತದಲ್ಲಿ ಗಣ್ಯರಾದ ನರೇಂದ್ರನಾಥರಿಗೆ ಹೇಳಿದ ಸಂದರ್ಭ ಈಗ ನೆನಪಿಗೆ ಬರುತ್ತದೆ. ಮಾರನೆಯ ದಿನ ಅದೇ ರೀತಿ ಆತ ಗುಣಾಕಾರ ಮಾಡಿ, ಗಣಿತದ ಸಾಕ್ಷ್ಯವನ್ನು ಒದಗಿಸಿದಾಗ ಅವರ ಆನಂದಕ್ಕೆ ಪಾರವೇ ಇರಲಿಲ್ಲವಂತೆ. ನರೇಂದ್ರನಾಥರೊಡನೆ ಅಂದು ನಡಸಿದ ಚರ್ಚೆ ಮುಂದೆ ರಾಮನ್-ನಾಥ್ ಸಿದ್ಧಾಂತವೆಂದು ಪ್ರಸಿದ್ಧಿಗಳಿಸಿತೆನ್ನುವುದು ಎಲ್ಲರಿಗೂ ತಿಳಿದ ವಿಷಯ.

ರಾಮನ್ ಶಿಷ್ಯರನ್ನು ಪ್ರೋತ್ಸಾಹಿಸುತ್ತಿದ್ದ ನಿದರ್ಶನ ಇನ್ನೊಂದನ್ನು ಅವರ ಶಿಷ್ಯ ಪಿಷಾರೊದಿ (ಮುಂದೆ ವಾಯುಮಾನ ಶಾಸ್ತ್ರದಲ್ಲಿ ಉನ್ನತ ಅಧಿಕಾರಿಯಾಗಿ ಪ್ರಶಸ್ತಿಗಳಿಸಿದವರು) ನೆನಪು ಮಾಡಿಕೊಂಡಿದ್ದಾರೆ. ಪಿಷಾರೊದಿ ಒಮ್ಮೆ x-ray ಸಲಕರಣೆಯನ್ನು ಉಪಯೋಗಿಸಿ ಪ್ರಯೋಗವೊಂದನ್ನು ನಡೆಸುತ್ತಿದ್ದರಂತೆ. ಅದು ಏನು ಕಾರಣವೊ, ನಿರೀಕ್ಷಿಸಿದ ಫಲ ಬರದೆ ಖಿನ್ನರಾಗಿ ಜೋಲುಮುಖ ಹಾಕಿಕೊಂಡು ಕುಳಿತಿದ್ದರಂತೆ. ಮಾಮೂಲಿನಂತೆ ಬೆಳಗ್ಗೆ ಏಳುಗಂಟೆಗೆಲ್ಲ ಪ್ರಯೋಗಾಲಯಕ್ಕೆ ಬಂದ ಪ್ರೊಫೆಸರು ಶಿಷ್ಯನ ಗೋಳುಮುಖ ಕಂಡು 'ಏನು ಸಮಾಚಾರ' ಎಂದು ಕೇಳಿದರು. ಆಗ ಪಿಷಾರೊದಿ 'ಸಾರ್, ಕೇಂಬ್ರಿಡ್ಜಿನಲ್ಲಿ ವಿಜ್ಞಾನಿಯೊಬ್ಬ ನಾನು ಮಾಡುತ್ತಿರುವ ಶೋಧನೆಯಲ್ಲೇ ಅವನೂ ತೊಡಗಿದ್ದಾನೆ. ಅವನ ಬಳಿ ಐದು ಕಿಲೋವಾಟ್ ಶಕ್ತಿಯುಳ್ಳ x-ray tube ಇದೆ. ನನ್ನ ಹತ್ತಿರಿರುವುದು ಒಂದು ಕಿಲೋವಾಟಿನ ಟ್ಯೂಬು ಮಾತ್ರ. ಅವನು ಮುಂದುವರಿಯುತ್ತಿದ್ದಾನೆ, ನಾನು ಹಿಂದುಳಿದಿದ್ದೇನೆ' ಎಂದು ಗೋಳಿಟ್ಟರಂತೆ. ಆಗ ರಾಮನ್ 'ಇಷ್ಟೇನೆ! ಇದಕ್ಕೆ ಪರಿಹಾರ ನಾನು ಹೇಳುತ್ತೇನೆ, ಕೇಳು. ನಿನ್ನಲ್ಲಿ ಹತ್ತು ಕಿಲೋವಾಟ್ ಶಕ್ತಿಯ ಬುದ್ಧಿ ಇದೆ. ಅದನ್ನು ಉಪಯೋಗಿಸಿ ಸಂಶೋಧನೆಯನ್ನು ಮುಂದುವರಿಸುತ್ತಾ ಹೋಗು' ಹೀಗೆಂದು ಹೇಳಿ ರಾಮನ್ ನಕ್ಕು ಹೊರ ಹೊರಟರಂತೆ. ಅವರು ಹೇಳಿದಂತೆ ಮಾಡುವವರೇ ಸೈ. ಅಷ್ಟೊಂದು ಆತ್ಮವಿಶ್ವಾಸವಿತ್ತು ಅವರಲ್ಲಿ. ಶಿಷ್ಯರನ್ನು ಹುರಿದುಂಬಿಸುತ್ತಿದ್ದರು ಈ ರೀತಿಯಲ್ಲಿ. ಶ್ರದ್ಧೆ, ಉತ್ಸಾಹ, ಹಿರಿದಾದದ್ದನ್ನು ಸಾಧಿಸಬೇಕೆಂಬ ದೃಢನಿರ್ಧಾರ, ಅದಕ್ಕಾಗಿ ಎಡೆಬಿಡದ ಅಭ್ಯಾಸ, ಇವು ವಿಜ್ಞಾನಿಯಾದವನಿಗೆ ಇರಲೇಬೇಕಾದ ಮುಖ್ಯ ಗುಣಗಳು ಎಂದು ಶಿಷ್ಯರೆಲ್ಲರಿಗೂ ಮೇಲಿಂದ ಮೇಲೆ ಒತ್ತಿ ಹೇಳುತ್ತಿದ್ದುದನ್ನು ಅವರ ಶಿಷ್ಯರೆಲ್ಲರೂ ಜ್ಞಾಪಿಸಿಕೊಂಡಿದ್ದಾರೆ.



## ಕವಿ ಪರಿಚಯ



**ಬಿ. ಪುಟ್ಟಯ್ಯ ರಾಧಾಕೃಷ್ಣ** ಬೆಂಗಳೂರು ಪುಟ್ಟಯ್ಯ ರಾಧಾಕೃಷ್ಣ ಎಂದೇ ಪ್ರಸಿದ್ಧರಾದ ಇವರ ಕಾಲ ಕ್ರಿ.ಶ. ೧೯೧೮-೨೦೧೨. ಇವರು ಬಿ.ಎಸ್.ಸಿ ಆನರ್ಸ್ ಪದವೀಧರರು. ಬಿ.ಎಸ್ ಆನರ್ಸ್ ಪದವಿಯಲ್ಲಿ ಚಿನ್ನದ ಪದಕ ಗಳಿಸಿದ ಹೆಗ್ಗಳಿಕೆ ಇವರದು.

ಮೈಸೂರು ಜಿಯಾಲಾಜಿಕಲ್ ಸೆಂಟರ್‌ನಲ್ಲಿ ಉದ್ಯೋಗ ಪ್ರಾರಂಭಿಸಿದ ಇವರು ೧೯೫೦ರಲ್ಲಿ 'ಡಾಕ್ಟರೇಟ್' ಪಡೆದು ಕರ್ನಾಟಕ ಸರ್ಕಾರದ ಗಣಿ ಭೂಗರ್ಭ ಇಲಾಖೆಯಲ್ಲಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತ ಇವರು ಸಿ.ವಿ. ರಾಮನ್, ಚಾರ್ಲ್ಸ್ ಡಾರ್ವಿನ್, ಐನ್‌ಸ್ಟೀನ್, ರಾಮಾನುಜಂ, ಮೇರಿಕ್ಯೂರಿ ಮುಂತಾದವರ ಜೀವನ ಚರಿತ್ರೆಗಳನ್ನು ಬರೆದಿದ್ದಾರೆ. ಇವರ

**ನಕ್ಷತ್ರಗಳತ್ತ ನಡೆಯುತ್ತ ನೋಡುವವನು ರಸ್ತೆಯಲ್ಲಿನ ಹಳ್ಳದಲ್ಲಿ ಬೀಳುವನು – ಅಲೆಗ್ಸಾಂಡರ್ ಸ್ಮಿತ್.**

ಸಾಹಿತ್ಯಸೇವೆಗಾಗಿ ೩ ಬಾರಿ ಸಾಹಿತ್ಯ ಅಕಾಡಮಿ ಪ್ರಶಸ್ತಿ , ೧೯೯೧ ರಲ್ಲಿ ಪದ್ಮಶ್ರೀ ಪ್ರಶಸ್ತಿ ಮತ್ತು ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿಗಳು ಲಭಿಸಿವೆ.

ಪ್ರಸ್ತುತ ಗದ್ಯಭಾಗವನ್ನು ಇವರ **ಸಿ.ವಿ. ರಾಮನ್** ಎಂಬ ಕೃತಿಯಿಂದ ಆಯ್ದುಕೊಳ್ಳಲಾಗಿದೆ.

### ಅರ್ಥ ತಿಳಿಯಿರಿ

**ವತ್ಸಲ**–ಪ್ರೀತಿಸುವ. **ಒರೆಹಚ್ಚು**–ಚೆನ್ನಾಗಿ ಉಜ್ಜಿ ಪರೀಕ್ಷಿಸು. **ತಾರತಮ್ಯ**– ವ್ಯತ್ಯಾಸ. **ಅನ್ವೇಷಣೆ**–ಹುಡುಕುವುದು. **ಕೊಂಡಾಟ**–ಹೊಗಳಿಕೆ. ಸ್ತುತಿ. **ಹುರುಪು**–ಹುಮ್ಮಸ್ಸು, ಉತ್ಸಾಹ, **ಪ್ರತಿಭೆ**–ಅತಿಶಯವಾದ ಬುದ್ಧಿವಂತಿಕೆ. **ಪ್ರಖರ**–ಅತಿ ಉಜ್ವಲವಾದ, ತೀಕ್ಷ್ಣ. **ಪರಿಪ್ರಶ್ನೆಸೇವೆ**–ಪ್ರಶ್ನೆಗಳನ್ನು ಕೇಳುವ ಕೆಲಸ. **ಖಿನ್ನ**–ನೊಂದುಕೊಳ್ಳು. **ಕೀಲಿ**–ಬೀಗದ ಕೈ. **ಕಿಲೋವಾಟ**–ಸಾವಿರ ವಾಟ್.

### ಅಭ್ಯಾಸ

**I. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ರಾಮನ್‌ರವರು ಯಾರನ್ನು ಕಠಿಣ ಪರೀಕ್ಷೆಗೆ ಒಳಪಡಿಸುತ್ತಿದ್ದರು?

೨. ಪ್ರಯೋಗಾಲಯಕ್ಕೆ ಬಂದ ರಾಮನ್‌ರ ಮೊದಲ ಕೆಲಸ ಯಾವುದಾಗಿರುತ್ತಿತ್ತು?

೩. ಶಿಷ್ಯರ ಸಾಧನೆಯನ್ನು ರಾಮನ್‌ರು ಹೊಗಳುತ್ತಿದ್ದುದರ ಉದ್ದೇಶ ಏನು?

೪. ವಾರವಾರವೂ ವ್ಯಾಸಂಗಗೋಷ್ಠಿಗಳನ್ನೇಕೆ ಏರ್ಪಡಿಸುತ್ತಿದ್ದರು?

೫. ಬೋಧಕರೆಲ್ಲರಿಗೂ ಆದರ್ಶವಾಗಬಲ್ಲ ರಾಮನ್‌ರ ಮಾತು ಯಾವುದು?

೬. ವೈಜ್ಞಾನಿಕ ವಿಷಯವನ್ನಲ್ಲದೆ ಬೇರೆ ವಿಷಯವನ್ನು ರಾಮನ್‌ರು ಏಕೆ ಪ್ರಸ್ತಾಪಿಸುತ್ತಿರಲಿಲ್ಲ?

೭. ಸಂಶೋಧನೆಯ ಲೇಖನವನ್ನು ಬರೆದ ಶಿಷ್ಯರನ್ನು ರಾಮನ್‌ರು ಹೇಗೆ ಪ್ರೋತ್ಸಾಹಿಸುತ್ತಿದ್ದರು.

೮. ಸಾಧಕ ಶಿಷ್ಯರ ಬಗೆಗಿರುವ ರಾಮನ್‌ರ ದೊಡ್ಡ ಗುಣ ಯಾವುದು?

೯. ಪಿಷಾರೊದಿ ಯಾರು?



**II. ಈ ಪ್ರಶ್ನೆಗಳಿಗೆ ೩–೪ ವಾಕ್ಯಗಳಲ್ಲಿ ಉತ್ತರಿಸಿ.**

೧. ರಾಮನ್‌ರು ಯಾರೊಬ್ಬರ ಶಿಪಾರಸನ್ನು ನಂಬಿ ಶಿಷ್ಯರನ್ನು ಆಯ್ಕೆ ಮಾಡಿಕೊಳ್ಳುತ್ತಿರಲಿಲ್ಲ ಏಕೆ?

೨. ಸಂಶೋಧನೆಯ ವಿಚಾರದಲ್ಲಿ ತಮ್ಮ ಶಿಷ್ಯರಿಂದ ಏನನ್ನು ನಿರೀಕ್ಷಿಸುತ್ತಿದ್ದರು?

೩. ರಾಮನ್‌ರು ಶಿಷ್ಯರ ಸೆಮಿನಾರುಗಳನ್ನು ಏಕೆ ತಪ್ಪಿಸಿಕೊಳ್ಳುತ್ತಿರಲಿಲ್ಲ?

೪. ರಾಮನ್‌ರು ಭೌತಶಾಸ್ತ್ರವಿಶಾರದರಲ್ಲದೆ ಗಣಿತಜ್ಞರೂ ಆಗಿದ್ದರು ಎಂಬುದನ್ನು ಹೇಗೆ ತಿಳಿದುಕೊಳ್ಳಬಹುದು?

**ಮಾತಿನಲ್ಲಿ ಮಾತ್ರ ವಿಧೇಯತೆ ಇದ್ದರೆ ಸಾಲದು, ನಡತೆಯಲ್ಲೂ ಇರಬೇಕು – ವಿಲ್ಸನ್.**

**III. ಸಂದರ್ಭದೊಂದಿಗೆ ಅರ್ಥ ವಿಶೇಷವನ್ನು ಬರೆಯಿರಿ.**

೧. ಇತರರನ್ನು ಸುಮ್ಮನೆ ಅನುಕರಿಸುವುದು ಸರ್ವಥಾಕೂಡದು

೨. 'ವಾದೇ ವಾದೇ ಜಾಯತೇ ತತ್ತ್ವಬೋಧಃ'

೩. ಅವರು ಹೇಳಿದಂತೆ ಮಾಡುವವರೇ ಸೈ

೪. ಅವು ಮನಸ್ಸಿನಲ್ಲಿ ಗಸ್ತು ತಿರುಗುತ್ತಿರಬೇಕು.

೫. ನಿನ್ನಲ್ಲಿ ಹತ್ತು ಕಿಲೋವಾಟ್ ಶಕ್ತಿಯ ಬುದ್ಧಿ ಇದೆ.

**IV. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರಿಸಿ.**

೧. ರಾಮನ್ ಶಿಷ್ಯವತ್ಸಲರೆನಿಸಿದುದು ಹೇಗೆ?

೨. ಶಿಷ್ಯರ ಸರ್ವತೋಮುಖ ಬೆಳವಣಿಗೆಗಾಗಿ ರಾಮನ್‌ರು ಮಾಡುತ್ತಿದ್ದು ಏನು?

೩. ರಾಮನ್-ನಾಥ್ ಸಿದ್ಧಾಂತ ಪ್ರಸಿದ್ಧಿಗೊಳ್ಳಲು ಮುಖ್ಯ ಕಾರಣ ಏನು?

೪. ರಾಮನ್‌ರನ್ನು ಮ್ಯಾಕ್ಸ್‌ಬಾರ್ನ್‌ರವರು ಏಕೆ ಮೆಚ್ಚಿಕೊಂಡಿದ್ದರು?

## ಭಾಷಾಭ್ಯಾಸ



**I. ಈ ನುಡಿಗಟ್ಟುಗಳನ್ನು ಮನನ ಮಾಡಿ ಸ್ವಂತ ವಾಕ್ಯ ರಚಿಸಿ. ಸಂದರ್ಭ ಬಂದಾಗ ನಿಮ್ಮ ಮಾತಿನಲ್ಲಿ, ಬರೆಹದಲ್ಲಿ ಅವನ್ನು ಉಪಯೋಗಿಸಿ ಕೇಳುಗರ ಮೆಚ್ಚುಗೆಗಳಿಸಿ.**

ಒರೆಹಚ್ಚು, ಬಯಲಿಗೆತರು, ಹೊಗಳಿ ಅಟ್ಟಕ್ಕೇರಿಸು, ಬೆನ್ನುತಟ್ಟು, ನಿರ್ವಂಚನೆಯಿಂದ ದುಡಿ, ಮೈಯೆಲ್ಲ ಕಿವಿಯಾಗಿ, ಪ್ರಶ್ನೆಸೇವೆಸಲ್ಲಿಸು, ಆನಂದಕ್ಕೆ ಪಾರವೇ ಇರಲಿಲ್ಲ, ಜೋಲುಮುಖ ಹಾಕಿಕೊಳ್ಳು.

**II. ಈ ಪದಗಳನ್ನು ಅರ್ಥಕ್ಕನುಸಾರವಾಗಿ ಬಿಡಿಸಿ ಸಮಾಸವನ್ನು ಹೆಸರಿಸಿ.**

ದೃಢನಿಶ್ಚಯ, ಅನ್ವೇಷಣಕಾರ್ಯ, ಕಠಿಣಪರೀಕ್ಷೆ, ಪ್ರಯೋಗಾಲಯ, ಯಂತ್ರೋಪಕರಣ, ಪ್ರಶಸ್ತಿಪತ್ರ,

**III. ಈ ಪದಗಳ ಸಂಸ್ಕೃತ ರೂಪವನ್ನು ಬರೆಯಿರಿ.**

ಗೊಟ್ಟಿ, ಬಿನ್ನಾಣ, ಸಂತೆ, ಬಿಜ್ಜೆ, ಮೊಗ

**IV. ಕೆಳಗಿನ ಪದಗಳ ಸಂಧಿಬಿಡಿಸಿ ಸಂಧಿಯನ್ನು ಹೆಸರಿಸಿ.**

ಪ್ರಯೋಗಾಲಯ, ಅತ್ಯುತ್ತಮ, ಶಿಷ್ಯನೇನಾದರೂ, ಮನದಟ್ಟು, ಮೈಯೆಲ್ಲ, ಹೊರಗೆಡಹು, ಗೋಳಿಡು.

**ಯಾವಾಗಲೂ ಬೇಸರವಿಲ್ಲದೆ ಕಾರ್ಯನಿರತನಾಗಿರುವವನು ಯಶಸ್ಸನ್ನು ಸಾಧಿಸುತ್ತಾನೆ – ಅಮೇರಿಕನ್ ನಾಣ್ಣುಡಿ.**

## ಚಟುವಟಿಕೆ

೧. ಭಾರತದ ಇನ್ನಿತರ ನೊಬೆಲ್ ಬಹುಮಾನಿತರ ಬಗ್ಗೆ ಲೇಖನ ಬರೆದು ತರಗತಿಯಲ್ಲಿ ಓದಿರಿ ಮತ್ತು ಶಾಲಾ ಭಿತ್ತಿ ಪತ್ರಿಕೆಯಲ್ಲಿ ಪ್ರಕಟಿಸಿ.

೨. 'ನನ್ನ ನೆಚ್ಚಿನ ಗುರು' ಈ ವಿಷಯವಾಗಿ ಪ್ರಬಂಧವನ್ನು ಬರೆದು ಶಾಲಾ ಭಿತ್ತಿಪತ್ರಿಕೆಯಲ್ಲಿ ಪ್ರದರ್ಶಿಸಿ.

೩. ಮಾದರಿ ಗುರು ಹೇಗಿರಬೇಕು ಎಂಬ ಬಗ್ಗೆ ಗೆಳೆಯರೊಂದಿಗೆ ಚರ್ಚಿಸಿ ಆ ಗುಣಗಳನ್ನು ಪಟ್ಟಿ ಮಾಡಿ.

೪. ಪ್ರಶ್ನಾವಳಿ ಸಹಿತವಾಗಿ ನಿಮ್ಮೂರಿನ ಸಾಧಕ ವ್ಯಕ್ತಿಯನ್ನು ಭೇಟಿ ಮಾಡಿ. ಅವರು ನೀಡಿದ ಉತ್ತರದ ಆಧಾರದ ಮೇಲೆ ಲೇಖನವನ್ನು ಸಿದ್ಧಗೊಳಿಸಿ ಶಾಲಾ ಹಸ್ತಲಿಖಿತ ಪತ್ರಿಕೆ/ಭಿತ್ತಿ ಪತ್ರಿಕೆಯಲ್ಲಿ ಪ್ರಕಟಿಸಿ.

೫. ಮೂಲಕೃತಿಯಾದ 'ಸಿ.ವಿ. ರಾಮನ್'ನ್ನು ಓದಿ, ರಾಮನ್‌ರ ಶ್ರೇಷ್ಠತೆಯನ್ನು ಅರಿತು ಅಭಿಮಾನವನ್ನು ತಾಳಿರಿ.

## ವ್ಯಾಕರಣಾಂಶ

### ಕ್ರಿಯಾಪದ

**ಈ ಕೆಳಗಿನ ವಾಕ್ಯಗಳನ್ನು ಗಮನಿಸಿ.**

ಅವನು ಬಂದನು, ಅವರು ನುಡಿದರು, (ಪ್ರಥಮಪುರುಷ ವಾಚಕಪದ ಅವನು, ಅವಳು, ಅವರು)

ನೀನು ಕೇಳುತ್ತಿ, ನೀವು ಹೋಗುತ್ತಿದ್ದೀರಿ (ಮಧ್ಯಮಪುರುಷ ನೀನು, ನೀವು)

ನಾನು ಬರೆಯುವೆನು, ನಾವು ಆಡುವೆವು (ಉತ್ತಮಪುರುಷ ನಾನು, ನಾವು)

ಈ ವಾಕ್ಯಗಳಲ್ಲಿರುವ ಎರಡನೆಯ ಪದ ಕ್ರಿಯಾಪದ. ಮೊದಲಿನದು ನಾಮಪದ. ಕೆಲಸವನ್ನು ಸೂಚಿಸದ ಪದಗಳು ನಾಮಪದಗಳು. ಇದನ್ನು ಈ ಹಿಂದೆ ತಿಳಿದಿದ್ದೀರಿ.

ನಾಮಪದದಂತೆಯೇ ಕ್ರಿಯಾಪದದ ಮೂಲರೂಪವಾದ 'ಧಾತು'ವಿಗೆ ಆಖ್ಯಾತ ಪ್ರತ್ಯಯಗಳು ಸೇರಿ ಕ್ರಿಯಾಪದಗಳಾಗುತ್ತವೆ. 'ಧಾತು'ವಿಗೆ ಸೇರುವ ಪ್ರತ್ಯಯಗಳಿಗೆ ಆಖ್ಯಾತ ಪ್ರತ್ಯಯ ಎನ್ನುತ್ತಾರೆ.

ಮೇಲಿನ ಕ್ರಿಯಾಪದಗಳಲ್ಲಿ ಬಂದನು ಎಂಬುದರಲ್ಲಿ 'ಬರು' ಕ್ರಿಯಾಪದದ ಮೂಲರೂಪವಾಗಿದೆ. ಹಾಗೆಯೇ ನುಡಿ, ಕೇಳು, ಹೋಗು, ಬರೆ, ಆಡು ಇತ್ಯಾದಿಗಳು ಧಾತುಗಳಾಗಿವೆ. ಅವುಗಳಿಗೆ ಕ್ರಮವಾಗಿ ಅನು, ಅರು; ಇ, ಇರಿ; ಎನು, ಎವು ಎಂಬ ಆಖ್ಯಾತ ಪ್ರತ್ಯಯಗಳು ಪುಲ್ಲಿಂಗದಲ್ಲಿ ಸೇರುತ್ತವೆ. ಇದೇ ರೀತಿಯಲ್ಲಿ ಸ್ತ್ರೀ ಮತ್ತು ನಪುಂಸಕ ಲಿಂಗದಲ್ಲಿ ಪ್ರತ್ಯಯಗಳು ಬೇರೆ ಇವೆ. ಗಮನಿಸಿ: ಪ್ರಥಮ ಪುರುಷವಾಚಕ ವಾಕ್ಯಗಳಲ್ಲಿ ಏಕವಚನದಲ್ಲಿ ಅನು ಎಂಬುದೂ, ಬಹುವಚನದಲ್ಲಿ ಅರು ಎಂಬುದೂ ಧಾತುವಾದ 'ಬರು'ವಿಗೆ

**ತಾಯಿ ಎಂಬುದು ಮಕ್ಕಳ ಹೃದಯದಲ್ಲೂ ತುಟಿಯಮೇಲೂ ಇರುವ ದೇವರ ಹೆಸರು**

ಸೇರಿ **ಬಂದನು, ಬಂದರು** ಎಂದಾಗಿದೆ. ಆದರೆ ಈ **ಬಂದನು** ಎಂಬ ಪದವನ್ನು ವಿಂಗಡಿಸಿದರೆ ಬರ್(ಬಂ)+ದ+ಅನು ಎಂದಾಗುವುದು. ನಡುವಿನಲ್ಲಿರುವ 'ದ' ಎಲ್ಲಿಂದ, ಏಕೆ ಬಂದಿತು? ಈ ಕುತೂಹಲ ನಿಮ್ಮಲ್ಲಿ ಮೂಡಿದರೆ ಅದು ಸಹಜವೇ. **'ಬಂದನು'** ಇರುವಂತೆಯೇ ಬರುತ್ತಾನೆ ಹಾಗೂ ಬರುವನು ಎಂಬಿತ್ಯಾದಿ ಪದಗಳನ್ನು ನೀವು ಬಲ್ಲಿರಿ. ಬಂದನು ಎಂದರೆ ಈಗಾಗಲೇ ಬಂದಿದ್ದಾನೆ ಎಂತಲೂ, ಬರುತ್ತಾನೆ ಎಂದರೆ ಈಗ, ಸದ್ಯದಲ್ಲಿ ಬಂದು ನಮ್ಮನ್ನು ಸೇರಿಕೊಂಡಿದ್ದಾನೆ ಎಂತಲೂ, ಬರುವನು ಎಂದರೆ ಆಮೇಲೆ, ಬಳಿಕ ಅಥವಾ ನಾಳೆಗೆ ಬರಲಿದ್ದಾನೆ ಎಂತಲೂ ಅರ್ಥವಾಗುತ್ತದಲ್ಲವೇ? ಅಂದರೆ ಭೂತಕಾಲ (ಆಗಿಹೋದದ್ದು) ವರ್ತಮಾನಕಾಲ (ಈಗ ನಡೆಯುತ್ತಿರುವಂತಹುದು), ಭವಿಷ್ಯತ್ ಕಾಲ (ಮುಂದೆ ಆಗಲಿರುವಂತಹುದು)ಗಳನ್ನು ಸೂಚಿಸುವ ದ (ಭೂ.ಕಾಲ) ಉತ್ತ (ವ.ಕಾಲ) ವ (ಭ.ಕಾಲ) ಎಂಬುದು ಕಾಲಸೂಚಕ ಪ್ರತ್ಯಯಗಳೆಂದೆನಿಸಿ ಧಾತುವಿಗೆ ಆಖ್ಯಾತ ಪ್ರತ್ಯಯ ಸೇರುವಾಗ ಅವೆರಡರ ನಡುವೆ ಸೇರಿ ಪೂರ್ಣರೂಪದ ಕ್ರಿಯಾಪದಗಳಾಗುತ್ತವೆ. ಅಂದರೆ ಧಾತು+ಕಾಲಸೂಚಕ ಪ್ರತ್ಯಯ+ಆಖ್ಯಾತ ಪ್ರತ್ಯಯ=ಕ್ರಿಯಾಪದ.

ಇನ್ನೊಮ್ಮೆ ಗಮನಿಸಿ: ಅನು, ಅರು; ಇ, ಇರಿ; ಎನು, ಎವು ಎನ್ನುವುದು ಈ ಆರು ಆಖ್ಯಾತ ಪ್ರತ್ಯಯಗಳು ಧಾತುವಿಗೆ ಸೇರುವಾಗ ನಡುವೆ ಕಾಲಸೂಚಕ ಪ್ರತ್ಯಯವು ಬರುತ್ತದೆ. ಈ ಕಾಲಸೂಚಕ ಪ್ರತ್ಯಯ ನಡುವೆ ಸೇರದೇ ಹೋದಲ್ಲಿ ಅದು ನಿಷೇಧಾರ್ಥಕ ಕ್ರಿಯಾಪದವಾಗುತ್ತದೆ. ಬಂದನು ಎಂಬಲ್ಲಿ 'ದ'ವನ್ನು ತೆಗೆದಾಗ 'ಬರನು' ಎಂದಾಗುತ್ತದೆ.

**ಕಾಲಪಲ್ಲಟ:** ಲಿಖಿತ ಭಾಷೆಯಲ್ಲಿ ಮೂರು ಕಾಲಗಳಿದ್ದರೂ ನಮ್ಮ ಆಡು ಭಾಷೆಯಲ್ಲಿ ಭವಿಷ್ಯತ್ ಕಾಲವನ್ನು ಇರಿಸಿಕೊಳ್ಳುವುದು ಕಡಿಮೆಯೇ ಆಗಿದೆ. ಎಷ್ಟೋಬಾರಿ ನಾವು ಹೇಳುತ್ತೇವೆ, 'ಅವನು ನಾಳೆ ಬರುತ್ತಾನೆ' ಎಂದು. ಅದರ ಶುದ್ಧ ರೂಪ 'ನಾಳೆ ಬರುವನು' ಎಂದೇ ಆಗಬೇಕಿತ್ತು. ಅದನ್ನು ನಾವು ಗಮನಿಸುವುದೂ ಇಲ್ಲ. ಅರ್ಥವಾಗುತ್ತದಲ್ಲ, ಅಷ್ಟು ಸಾಕು. ಆದರೆ ಬರೆಹದ ಭಾಷೆಯು ವ್ಯಾಕರಣ ಶುದ್ಧವಾಗಿರಬೇಕಾದುದು ಮುಖ್ಯ.





**ಕನ್ನಡಕ್ಕೆ ಹೋರಾಡು ಕನ್ನಡದ ಕಂದ ಕನ್ನಡವ ಕಾಪಾಡು ನನ್ನ ಆನಂದ–ಕುವೆಂಪು**

## ಗದ್ಯ–೭

# ನನ್ನಗೋಪಾಲ

**– ಕುವೆಂಪು**

**ಪಾಠ ಪ್ರವೇಶ:** ಇಂಗ್ಲೀಷ್ ಸಾಹಿತ್ಯದ ಪ್ರಭಾವದಿಂದ ಹೊಸಗನ್ನಡ ಸಾಹಿತ್ಯದಲ್ಲಿ ಅನೇಕ ಪ್ರಕಾರದ ಕೃತಿಗಳು ಬಂದುವು. ಸಣ್ಣಕತೆ, ಕಾದಂಬರಿ, ಕವಿತೆ, ಕಥನಕಾವ್ಯ, ಪ್ರಬಂಧ, ಜೀವನ ಚರಿತ್ರೆ, ವ್ಯಕ್ತಿಚಿತ್ರಣ ಇವೇ ಮೊದಲಾದುವುಗಳೊಂದಿಗೆ ನಾಟಕ ಪ್ರಕಾರವೂ ಒಂದಾಗಿದೆ (ಹದಿನೆಂಟನೆಯ ಶತಮಾನದಲ್ಲಿ ರಚಿತವಾದ ಸಿಂಗರಾರ್ಯನ 'ಮಿತ್ರವಿಂದ ಗೋವಿಂದ'ವೇ ಮೊದಲ ಉಪಲಬ್ಧ ನಾಟಕ). ಇದು ವಾಚಕ (ಸಂಭಾಷಣೆ) ಆಂಗಿಕ (ಅಂಗಚಲನೆ) ಆಹಾರ್ಯ (ವೇಷಭೂಷಣ) ಸಾತ್ವಿಕ (ಮುಖಭಾವ) ಎಂಬ ನಾಲ್ಕು ಅಂಗಗಳಿಂದ ಕೂಡಿದುದು. ಇಂದು ಇದರ ದೃಶ್ಯ ಮಾಧ್ಯಮಕ್ಕೆ ರಂಗಪರಿಕರ, ಬೆಳಕು, ಧ್ವನಿಗಳೂ ಸೇರಿಕೊಂಡಿವೆ. ಇಂತಹ ನಾಟಕವನ್ನು ಅದರಲ್ಲಿಯ ಅಂಕ, ದೃಶ್ಯ ಇತ್ಯಾದಿ ಗಳಿಗನುಗುಣವಾಗಿ ರೂಪಕ, ಪ್ರಹಸನ, ಏಕಾಂಕಗಳೆಂದು ಕರೆಯುವುದೂ ಉಂಟು. ಪ್ರಕೃತ ನಾಟಕ ಭಾಗದಲ್ಲಿ ಜೀವನ ನಿರ್ವಹಣೆಯ ಸಮಸ್ಯೆಯ ನಡುವೆಯೂ ಹೆತ್ತವಳ ಶೈಕ್ಷಣಿಕ ಕಾಳಜಿ, ನಿಷ್ಕಲ್ಮಷ ಭಕ್ತಿ, ಪ್ರಕೃತಿಯ ಆರಾಧನೆ ಇತ್ಯಾದಿಗಳ ಕಡೆಗೆ ನಾಟಕಕಾರರು ಗಮನವಿತ್ತುಚಿತ್ರಿಸಿದುದನ್ನು ಕಾಣಬಹುದು.

### ನೋಟ ಒಂದು



(ಒಂದು ಸಣ್ಣ ಗುಡಿಸಲು. ಅದರ ಜಗಲಿಯ ಮೇಲೆ ಒಂದು ಮೂಲೆಯಲ್ಲಿ ಒಂದು ಗೋಪಾಲನ ಸಣ್ಣ ವಿಗ್ರಹವಿರುವ ದೇವರ ಗೂಡು. ಗೋಪಾಲನ ತಾಯಿ ಒಂದು ಚರಕದ ಮುಂದೆ ಕುಳಿತು ನೂಲುತ್ತಿದ್ದಾಳೆ. ಆಕೆ ಬಡ ಹೆಂಗಸು, ವಿಧವೆ.)

ನನ್ನ ಗೋಪಾಲನೆಲ್ಲಿ? ಹಾಸಿಗೆಯಿಂದ ಇನ್ನೂ ಏಳಲಿಲ್ಲವೊ ಏನೊ? (ಒಂದು ಮೂಲೆಯ ಕಡೆ ನೋಡಿ)

ಗೋಪಾಲ, ಬೆಳಗಾಯ್ತು, ಮೇಲೇಳು; ನೋಡಲ್ಲಿ, ಸೂರ್ಯನಾರಾಯಣನು ತನ್ನ ಚಿನ್ನದ ಕಿರಣಗಳಿಂದ ಬಾವಿಯ ಬಳಿಯ ತೆಂಗಿನ ಮರದ ತುದಿಯಲ್ಲಿ ತೊಳಗುತ್ತಿದ್ದಾನೆ. ಕೇಳಲ್ಲಿ, ಹಕ್ಕಿಗಳು ಹಾಡುತ್ತ, ಹಾರಾಡಿ ಕರೆಯುತ್ತಿವೆ ನಿನ್ನ. ಹೂಗಳು ಅರಳಿ ಬನದಲ್ಲಿ ನಿನಗಾಗಿ ಕಾದುಕೊಂಡಿವೆ. ಎದ್ದೇಳು ಗೋಪಾಲ. ಶಾಲೆಗೆ ಹೊತ್ತಾಗುತ್ತದೆ. ಗುರುಗಳೇನೆಂದಾರು? ಏಳು ಗೋಪಾಲ. ನನ್ನ ಕಂದಾ.

(ಗೋಪಾಲನು ಶುಚಿಯಾದ ಬಟ್ಟೆಗಳನ್ನು ಉಟ್ಟುಕೊಂಡು, ಬುಟ್ಟಿಯಲ್ಲಿ ಹೂಗಳನ್ನು ಕೊಯ್ದುಕೊಂಡು ಬೇಗ ಬರುತ್ತಾನೆ.)

**ಗೋಪಾಲ :** ಕರೆದೆಯೇನಮ್ಮ?

**ತಾಯಿ :** ಹೌದು, ಮಗು. ಮಲಗಿದ್ದೆಯೆಂದು ಕರೆದೆ. ಎಲ್ಲಿಗೆ ಹೋಗಿದ್ದೆ?

**ಗೋಪಾಲ :** ಆಗಲೆ ಎದ್ದು ಸ್ನಾನಮಾಡಿ, ನಿನಗೆ ಗೋಪಾಲನ ಪೂಜೆಗೆ ಬೇಕಾದ ಹೂಗಳನ್ನು ಕೊಯ್ಯಲೆಂದು ಬನಗಳಿಗೆ ಹೋಗಿದ್ದೆ.

ಮಹತ್ವದ ಕಾರ್ಯಗಳನ್ನು ಮಾಡಿ ಮುಗಿಸುವುದಕ್ಕಾಗಿಯೇ ಪರಮಾತ್ಮ ನಮ್ಮನ್ನು ಸೃಷ್ಟಿಸಿದ್ದಾನೆ ಅನ್ನುವುದನ್ನು ನಂಬಿರಿ–ಸ್ವಾಮಿ ವಿವೇಕಾನಂದ.

ತಾಯಿ : ಹೂ ಕೊಯ್ದೆಯೇನು?

ಗೋಪಾಲ : ಹೌದಮ್ಮ, ನೋಡಿಲ್ಲಿ! (ಬುಟ್ಟಿಯನ್ನು ತೋರಿಸುತ್ತ)

ಬನದಲ್ಲಿ ಏನಮ್ಮ ಸೊಗಸು! ಏನು ಆನಂದ! ಮಲ್ಲಿಗೆಯ ಹೂವು, ಕೇದಗೆಯ ಹೂವು, ಸಂಪಿಗೆಯ ಹೂವು, ಪರ್ವತಬಾಳೆಯ ಹೂವು, ಗೋರಂಟೆಯ ಹೂವು! ಏನಮ್ಮ, ಸಾವಿರಾರು ಮಳೆಬಿಲ್ಲುಗಳು ಸೇರಿ ಕುಣಿದಂತೆ ತೋರುತಿತ್ತು. ಆಮೇಲೆ ಹಕ್ಕಿಗಳ ಇಂಪಾದ ಗಾನ! ತಂಗಾಳಿ! ಸೂರ್ಯದೇವನ ಹೊಂಬೆಳಕು! ಹಸುರಾದ ಚಿಗುರು ಹುಲ್ಲಿನ ಮೇಲೆ ಕೋಟ್ಯಂತರ ಹಿಮಮಣಿಗಳು ಮಿರುಗುವ ಲೀಲೆ! ಮನೆಗಿಂತ ಬನವೇ ಸೊಗಸಮ್ಮ, ನೀನೊಬ್ಬಳಲ್ಲಿದ್ದರೆ.....

ತಾಯಿ : ಹೌದು, ಕಂದಾ! ಅವುಗಳೆಲ್ಲ ನೋಡು, ಆ ಗೋಪಾಲನ ಲೀಲೆ! (ವಿಗ್ರಹವನ್ನು ತೋರಿಸುತ್ತಾಳೆ.) ಹೂಗಳನ್ನು ಅಲ್ಲಿಟ್ಟು ನೀನು ಶಾಲೆಗೆ ಹೋಗು. ಹೊತ್ತಾಗಿ ಹೋದರೆ ಗುರುಗಳು ನೊಂದುಕೊಳ್ಳುತ್ತಾರೆ. ನಿನಗಾಗಿ ಗಂಜಿ ಮಾಡಿಟ್ಟಿದ್ದೇನೆ.

ಗೋಪಾಲ : ಆಗಲಮ್ಮ, ಹೋಗುತ್ತೇನೆ. ಅಮ್ಮ, ನಾನು ಬರುವಾಗ ಕಾಡು ದಾಟಿ ಬರಬೇಕು. ಬೈಗಿನ ಹೊತ್ತು ನನಗಲ್ಲಿ ಒಬ್ಬನೇ ಬರುವುದಕ್ಕೆ ಹೆದರಿಕೆ. ಜೊತೆಗೆ ಯಾರಾದರೂ ಬೇಕಮ್ಮ. ನೆರೆಯೂರಿನಿಂದ ಬರುವ ಹುಡುಗರಿಗೆ ಜೊತೆಗೆ ಆಳುಗಳಿರುವರಮ್ಮ. ರಾಮು, ಕಿಟ್ಟಿ, ನಾಣಿ, ಮಾಧು ಇವರೆಲ್ಲರಿಗೂ ಒಬ್ಬೊಬ್ಬ ಆಳು. ನನಗೆ ಮಾತ್ರ ಯಾರೂ ಇಲ್ಲ.

ತಾಯಿ : ಮಗೂ, ಅವರೆಲ್ಲ ಶ್ರೀಮಂತರ ಮಕ್ಕಳು; ಬೇಕಾದಷ್ಟು ಹಣವಿದೆ. ನಮಗೆಲ್ಲಿ ಬರಬೇಕು? ನೀನೇ ಬಲ್ಲೆ, ಹೊಟ್ಟೆಗೆ ಹಿಟ್ಟು ಸಿಕ್ಕುವುದೇ ಕಷ್ಟ. ನೂಲು ಮಾರಿ ಬಂದ ಮೂರು ಕಾಸಿನಲ್ಲಿ ನಮ್ಮ ಸಂಸಾರವೆಲ್ಲ ಸಾಗಬೇಕು. ನೋಡು, ಆ ಗೋಪಾಲ ಕೊಡಬೇಕು, ನಾವು ಉಣಬೇಕು.

ಗೋಪಾಲ : ಅಮ್ಮಾ, ನನಗೊಂದು ಹೊಸ ಪಂಚೆ ಕೊಡುವೆನೆಂದು ಮೊನ್ನೆಯೇ ಹೇಳಿದ್ದೆ; ಇಂದು ಕೊಡುತ್ತೀಯಾ? ನನ್ನ ಗೆಳೆಯರೆಲ್ಲರೂ ನನ್ನನ್ನು ನೋಡಿ ಹಾಸ್ಯಮಾಡುತ್ತಾರಮ್ಮ. ಅವರೆಲ್ಲಾ ಬೆಲೆಯುಳ್ಳ ಬಟ್ಟೆ ಹಾಕಿಕೊಂಡು ಬರುತ್ತಾರೆ.

ತಾಯಿ : ಕೊಡುತ್ತೇನೆ, ಕಂದ. ನಿನಗಾಗಿ ಹಗಲಿರುಳೂ ನೂತು ಅದನ್ನು ಸಂಪಾದಿಸಿದ್ದೇನೆ. ಹೋಗು, ಗಂಜಿಯುಂಡು ಬಾ! ಕೊಡುತ್ತೇನೆ. (ಗೋಪಾಲನು ಹೂವಿನ ಬುಟ್ಟಿಯನ್ನು ಇಟ್ಟು ಹೋಗುತ್ತಾನೆ.)

ಲಕ್ಷ್ಮೀಶ, ಇದುವರೆಗೆ ನಾನು ಬಡವಳೆಂದು ನನಗೆ ತಿಳಿದಿರಲಿಲ್ಲ. ಇಂದು ನನ್ನ ಗೋಪಾಲನ ಬಯಕೆ ನನಗದನ್ನು ತಿಳಿಸಿತು. ಅಯ್ಯೋ! ಆ ಮಗುವಿಗೆ ಬಡತನದ ಬವಣೆಯೇಕೆ? ಇದುವರೆಗೆ ಅವನು ಕೇಳಿದ ವಸ್ತುವನ್ನೆಲ್ಲ ಕೊಟ್ಟು ಅವನಿಗೆ ಬಡತನದ ಸುದ್ದಿಯನ್ನೇ ತಿಳಿಸದಿದ್ದೆ. –ಇಂದು ಅವನ ಜೊತೆಗೆ ಯಾರನ್ನು ಕಳುಹಿಸಲಿ? ಕಾಡಿನಲ್ಲಿ ಮುದ್ದು ಕಂದನಿಗೆ ಹೆದರಿಕೆಯಂತೆ ಗೋಪಾಲ!

**ವಿನಾಶಕ್ಕೆ ಹೇತುವಾಗುವುದು ಅಹಂಕಾರ, ಉನ್ನತಿಗೆ ದಾರಿ ತೋರುವುದು ವಿನಯ – ಯೇಸುಕ್ರಿಸ್ತ.**

ಗೋಪಾಲ, ನಿನ್ನನ್ನೇ ನಂಬುವಂತೆ ಹೇಳಿ, ನನ್ನ ಗೋಪಾಲನನ್ನ ಕಳುಹಿಸುತ್ತೇನೆ. (ಗೋಪಾಲನು ಬಗಲಲ್ಲಿ ಒಂದು ಸಣ್ಣ ಚಾಪೆ ಇಟ್ಟುಕೊಂಡು, ಕೈಯಲ್ಲಿ ಓಲೆ ಹಿಡಿದು, ಲೇಖನಿ ತೆಗೆದುಕೊಂಡು ಸಿದ್ಧನಾಗಿಬರುತ್ತಾನೆ.)

**ಗೋಪಾಲ** : ಅಮ್ಮ, ನಾನು ಶಾಲೆಗೆ ಹೊರಡುತ್ತೇನೆ. (ತಾಯಿಗೆ ನಮಸ್ಕಾರ ಮಾಡುತ್ತಾನೆ.)

**ತಾಯಿ** : ಹಣೆಗೆ ತಿಲಕವನ್ನಿಟ್ಟುಕೋ, ಕಂದ. ಆ ಕರಡಿಗೆ ತೆಗೆದುಕೊಂಡು ಬಾ, ಇಲ್ಲಿ. (ಗೋಪಾಲನು ಕರಡಿಗೆ ತಂದುಕೊಡುತ್ತಾನೆ. ತಾಯಿ ತಿಲಕವನ್ನಿಡುತ್ತಾಳೆ.)

ಕಂದಾ, ಸುಖವಾಗಿ ಹೋಗಿ ಬಾ. ಗೋಪಾಲನು ನಿನ್ನ ಜೊತೆಗೆ ಇರಲಿ. ತೆಗೆದುಕೊ, ಈ ಪಂಚೆಯನ್ನು. (ಕೊಡುತ್ತಾಳೆ.)

ನೀನು ಶಾಲೆಯಿಂದ ಬರುವಾಗ ಕಾಡಿನಲ್ಲಿ ಹೆದರಿಕೆಯಾದರೆ ಗೋಪಾಲನನ್ನು ಕೂಗು, ಬರುತ್ತಾನೆ.

**ಗೋಪಾಲ** : ಯಾರಮ್ಮ ಅವನು?

**ತಾಯಿ** : ನಿನ್ನಣ್ಣ, ನನ್ನ ಹಿರಿಯ ಮಗ. ಕಾಡಿನಲ್ಲಿ ಅವನು ಯಾವಾಗಲೂ ದನ ಕಾಯುತ್ತಾ ಇರುತ್ತಾನೆ. ನೀನು ಕರೆದರೆ ಬಂದು ನಿನ್ನನ್ನು ಕಾಡು ದಾಟಿಸುತ್ತಾನೆ.

**ಗೋಪಾಲ** : ಅಮ್ಮ, ಅವನಿಗೆ ನನ್ನ ಗುರುತಿದೆಯೆ?

**ತಾಯಿ** : ಹೌದು, ಅವನಿಗೆ ಎಲ್ಲರ ಗುರುತೂ ಇರುತ್ತದೆ. ನೀನು ಹೆದರಬೇಡ, ಹೋಗು. ನೀನು ಕರೆದರೆ ಬಂದೇ ಬರುತ್ತಾನೆ. (ಗೋಪಾಲನು ಹೋಗುತ್ತಾನೆ.) ನನ್ನ ಭಕ್ತಿಗೆ ಬಲವಿಲ್ಲೆಂದು ಕೋಪಮಾಡಬೇಡ, ಗೋಪಾಲ. (ವಿಗ್ರಹಕ್ಕೆ ಪುನಃ ಅಡ್ಡಬೀಳುತ್ತಾಳೆ.)



## ನೋಟ ಎರಡು

(ಒಂದು ಕಾಡು. ಸಂಜೆಯ ಸಮಯ. ಗೋಪಾಲನು ಶಾಲೆಯಿಂದ ಹಿಂತಿರುಗಿ ಬರುತ್ತಾನೆ. ತನ್ನ ಕೈಲಿದ್ದ ಚಾಪೆ ಮೊದಲಾದುವುಗಳನ್ನು ಕೆಳಗಿಟ್ಟು ಹೂಗಳನ್ನು ಆಯುತ್ತಾನೆ.)

**ಗೋಪಾಲ** : ಈ ಮರದಲ್ಲಿ ಏನು ಹೂವಿನ ಗೊಂಚಲು! ಭಾರ ಹೆಚ್ಚಾಗಿ ತಲೆ ಬಾಗುತ್ತಿದೆ, ಮರ. ಈ ನೇರಿಲ ಹಣ್ಣು ಎಷ್ಟು ಕಪ್ಪಾಗಿವೆ! (ಆಯ್ದು ತಿನ್ನುತ್ತಾನೆ.) ಆಗಲೇ ಬೈಗಾಯ್ತು. ಏನು ಸೂರ್ಯನಪ್ಪ! ನಾನು ಮನೆಗೆ ಹೋಗುವವರೆಗಾದರೂ ಮುಳುಗದೆ ಕಾದರೆ! ಈ ಕಪ್ಪಿನಲ್ಲಿ ನನಗೊಬ್ಬನಿಗೇ ಹೆದರಿಕೆ. ಓಹೋ ಮರೆತಿದ್ದೆ, ಅಮ್ಮ ಹೇಳಿದ್ದು. ನನ್ನಣ್ಣ ಗೋಪಾಲ ಇಲ್ಲಿಯೇ ದನ ಕಾಯುತ್ತಿರುವನಂತೆ. ಅವನನ್ನು ಕರೆಯುತ್ತೇನೆ. "ಗೋಪಾಲಣ್ಣಾ, ಗೋಪಾಲಣ್ಣಾ! ಗೋಪಾಲಣ್ಣಾ!" ಇದೇಕೆ, ಉತ್ತರವೇ ಇಲ್ಲ! ದನಗಳನ್ನು ಕಾಯುತ್ತಾ ಇನ್ನೆಲ್ಲಿಗೆ ಹೋದನೋ ಏನೊ? ಆದರೆ ಅಮ್ಮ ಹೇಳಿದ್ದಾಳೆ. ಇಲ್ಲಿಯೇ ಇರುತ್ತಾನೆಂತ. ಅಮ್ಮನ ಮಾತು ಸುಳ್ಳಾಗಲಾರದು! ಮತ್ತೆ ಕರೆದು ನೋಡುತ್ತೇನೆ; ಅಣ್ಣಾ, ಅಣ್ಣಾ! ಏ ಅಣ್ಣಾ! ನನಗೆ ಹೆದರಿಕೆ, ಅಣ್ಣಾ. ಕತ್ತಲಾಗುತ್ತಿದೆ, ಎಲ್ಲಿದ್ದೀಯಣ್ಣಾ, ಏ ಗೋಪಾಲಣ್ಣಾ!

**ಬೇರೆಯವರಿಗೆ ನಾವು ಮಾಡುವ ಅತ್ಯಲ್ಪ ಸೇವೆಯೂ ನಮ್ಮಲ್ಲಿ ಅಡಗಿರುವ ಶಕ್ತಿಯನ್ನು ಬಡಿದೆಬ್ಬಿಸುತ್ತದೆ–ಸ್ವಾಮಿವಿವೇಕಾನಂದ.**

**ಬನದ ಗೋಪಾಲ** : (ತೆರೆಯೊಳಗಿಂದಲೆ) ಏನೋ, ಗೋಪಾಲ?

**ಗೋಪಾಲ** : ಎಲ್ಲಿದ್ದೀಯಾ? ಹೆದರಿಕೆಯಾಗುತ್ತಿದೆ ನನಗೆ. ಅಮ್ಮ ಹೇಳಿದ್ದಳು, ಹೆದರಿಕೆಯಾದರೆ ನಿನ್ನನ್ನು ಕರೆ ಅಂತ.

**ಬನದ ಗೋಪಾಲ** : ಹೆದರಬೇಡ, ನಾನಿಲ್ಲಿಯೇ ಇದ್ದೇನೆ. ಧೈರ್ಯವಾಗಿ ಹೋಗು ಮನೆಗೆ.

**ಗೋಪಾಲ** : ಎಲ್ಲಿದ್ದೀಯೆ, ಬಾ'ಣ್ಣಾ–

**ಬನದ ಗೋಪಾಲ** : ತುಂಬಾ ಕೆಲಸದ ಮೇಲಿದ್ದೇನೆ ಕಣೋ. ಈಗ ಬರುವುದಕ್ಕಾಗುವುದಿಲ್ಲ. ನೀನು ಹೋಗು.

**ಗೋಪಾಲ** : ನೀನು ಮನೆಗೆ ಬರುವುದಿಲ್ಲವೆ–ಅಮ್ಮನ ನೋಡುವುದಕ್ಕೆ? ಕತ್ತಲಲ್ಲಿ ಕಾಡಿನ ನಡುವೆ ಏಕಿರುವೆ?

**ಬನದ ಗೋಪಾಲ** : ನಾನು ಆಮೇಲೆ ಹಿಂದಿನಿಂದ ಬರುತ್ತೇನೆ, ಅಮ್ಮನಿಗೆ ಹೇಳು. ಅಮ್ಮ ನಿನಗಾಗಿ ಕಾದಿದ್ದಾಳೆ; ಬೇಗ ಹೋಗಪ್ಪ.

ಗೋಪಾಲನು ಹೋಗುತ್ತಾನೆ. ಬನದ ಗೋಪಾಲನು ಕಾಡಿನಿಂದ ಈಚೆಗೆ ಬರುತ್ತಾನೆ. ತಲೆಯ ಮೇಲೆ ಸಣ್ಣದೊಂದು ಕಿರೀಟ, ನವಿಲುಗರಿ; ಕೈಲೊಂದು ಕೊಳಲು. ಗೋಪಾಲನು ಹೋಗುತ್ತಿರುವುದನ್ನೆ ನಗುತ್ತಾ ಸ್ವಲ್ಪ ಹೊತ್ತು ನೋಡುತ್ತಾನೆ. ಬಳಿಕ ಕೊಳಲೂದಿ ಹಾಡುತ್ತಾನೆ.

**ಧನ್ಯಾಸಿ–ಆದಿತಾಳ**

ತಿಳಿವಳಿಕೆಗೆ ನಾ ಸಿಲುಕೇ ಮನುಜಾ
ಒಲುಮೆಗೆ ಸೆರೆಯಾಗುವೆನು ॥ ಪ ॥

ತಪಸಿಗಳೆನ್ನನು ಜ್ಞಾನದಿ ಮುಟ್ಟಲು
ಯುಗಯುಗಗಳು ಬಲು ಬಳಲುವರು
ಯೋಗಿಗಳೆನ್ನನು ಜನುಮ ಜನುಮದಲಿ
ಹೊಂದಲು ಸಾಧನೆ ಮಾಡುವರು ॥ ೧ ॥

ಕಡಲಿನ ಬಿತ್ತರ ಸಾಲದು ಪವಡಿಸೆ
ಭಕ್ತಿಯ ಕಂಬನಿ ಮನೆ ಎನಗೆ
ಹಿಮಗಿರಿ ಎತ್ತರ ಸಾಲದು ನಾನಿರೆ
ಭಕ್ತನ ಹೃದಯವು ಸಾಕೆನಗೆ ॥ ೨ ॥

ಬೃಂದಾವನದಾ ಗೋಪಿಯರರಿತರೆ
ವೇದಗಳಾಡುವ ಸತ್ಯವನು?
ಹಾಲನು ಮಾರುವ ಹೆಣ್ಣುಗಳೊಲ್ಮೆಯೆ
ಮೀರದೆ ಯೋಗಿಯ ಸಾಧನೆಯ? ॥ ೩ ॥

॥ ತೆರೆ ॥

**ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗೆ ಅಂಜಿದೊಡೆಂತಯ್ಯ–ಅಕ್ಕಮಹಾದೇವಿ**

## ಕವಿ ಪರಿಚಯ



**ಕುವೆಂಪು: ೧೯೦೪– ೧೯೯೪** ಪ್ರಕೃತಿ ಕವಿ, ಕನ್ನಡದ ವರ್ಡ್ಸ್‌ವರ್ತ್ ಎಂದೇ ಖ್ಯಾತರಾಗಿದ್ದ ಕುಪ್ಪಳಿ ವೆಂಕಟಪ್ಪ ಪುಟ್ಟಪ್ಪ ಇವರು ಉಪನ್ಯಾಸಕ ಹುದ್ದೆಯಿಂದ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿಯ ಸ್ಥಾನದವರೆಗೆ ಹಂತ ಹಂತವಾಗಿ ಎತ್ತರಕ್ಕೆ ಬೆಳೆದವರು; ವಿಶ್ವವಿದ್ಯಾನಿಲಯವನ್ನೂ ಬೆಳೆಸಿದವರು.

ಚಂದ್ರಮಂಚಕೆ ಬಾ ಚಕೋರಿ, ನವಿಲು, ಪಕ್ಷಿಕಾಶಿ (ಕವನಸಂಕಲನ) ಬೆರಳ್‌ಗೆ ಕೊರಳ್, ಶೂದ್ರತಪಸ್ವಿ, ಜಲಗಾರ (ನಾಟಕ) ರಸೋವೈಸಃ, ವಿಭೂತಿ ಪೂಜೆ, ದ್ರೌಪದಿಯ ಸಿರಿಮುಡಿ (ವಿಮರ್ಶೆ) ನನ್ನ ದೇವರು ಮತ್ತು ಇತರ ಕತೆಗಳು, ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು (ಕಾದಂಬರಿ) ಮಹಾಕಾವ್ಯವಾದ ಶ್ರೀ ರಾಮಾಯಣ ದರ್ಶನಂ– ಇವೇ ಮೊದಲಾದ ೮೦ ಕೃತಿಗಳನ್ನು ರಚಿಸಿದವರು. ಪದ್ಮಭೂಷಣ (೧೯೫೮) ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ (೧೯೫೫) ರಾಷ್ಟ್ರಕವಿ (೧೯೬೪) ಜ್ಞಾನಪೀಠ ಪ್ರಶಸ್ತಿ (೧೯೬೮) ಪಂಪ ಹಾಗೂ ಕರ್ನಾಟಕ ರತ್ನ ಪ್ರಶಸ್ತಿಗಳಿಂದ ಪುರಸ್ಕೃತರು. ಪ್ರಸ್ತುತ ನಾಟಕಾಂಶವನ್ನು ಅವರ **'ನನ್ನ ಗೋಪಾಲ'**ದಿಂದ ಆರಿಸಿಕೊಳ್ಳಲಾಗಿದೆ.

## ಅರ್ಥ ತಿಳಿಯಿರಿ

**ನೋಟ–** (ನಾಟಕದ) ದೃಶ್ಯ ಪದಕ್ಕೆ ಪರ್ಯಾಯವಾದುದು. **ಚರಕ–**ರಾಟೆ, ನೂಲು ತೆಗೆಯುವ ಸಾಧನ. **ಗೂಡು–**ವಸ್ತುಗಳನ್ನಿಡಲು ಗೋಡೆಯಲ್ಲಿ ಮಾಡಿದ ವ್ಯವಸ್ಥೆ, ನೆಲೆ. **ತೊಳಗು–**ಪ್ರಕಾಶಿಸು. **ಮಳೆಬಿಲ್ಲು–**ಕಾಮನ ಬಿಲ್ಲು. **ಇಂಪು–**ಮಧುರ. **ಮಿರುಗು–**ಪ್ರಕಾಶಿಸು. **ಗಂಜಿ–**ಅಂಬಲಿ, ರವೆ ಅಥವಾ ಅಕ್ಕಿ ತರಿಯಿಂದ ಮಾಡಿದ ನೀರಾದ ಆಹಾರ, **ಬೈಗು–**ಸಂಜೆ. **ನೂತು–**ನೂಲು ತೆಗೆದು. **ಬವಣೆ–**ಕಷ್ಟ, ತೊಂದರೆ. **ಓಲೆ–**ತಾಳೆಮರದ ಗರಿಯ ಹಾಳೆ, ಕಾಗದ. **ತಿಲಕ–**ಹಣೆಯ ಬೊಟ್ಟು. **ಸಿಲುಕೇ–**ಸಿಗಲಾರೆನು. **ಕಾ–**ಹಾದಿನೋಡು, ನಿರೀಕ್ಷಿಸು. **ಒಲುಮೆ–**ಪ್ರೀತಿ. **ಯೋಗಿ–**ಯೋಗದಲ್ಲಿ ತೊಡಗಿದ, ಯತಿ. **ಬಿತ್ತರ** (ತದ್ಭವ) ವಿಸ್ತಾರ (ಸಂಸ್ಕೃತ). **ಪವಡಿಸು–** ಮಲಗು, ನಿದ್ರಿಸು. **ಬಳಲು–**ಆಯಾಸ, ಶ್ರಮ.



## ಅಭ್ಯಾಸ

**I. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರಿಸಿ**

೧. ಗೋಪಾಲನ ಬೆಳಗಿನ ಮುಖ್ಯ ಕೆಲಸ ಏನಾಗಿತ್ತು?

೨. ಬಣ್ಣ ಬಣ್ಣದ ಹೂಗಳು ಹೇಗೆ ಕಾಣಿಸುತ್ತಿತ್ತು?

೩. ಗೋಪಾಲನು ಹೊಸ ಪಂಚೆಯನ್ನು ಬಯಸಿದುದೇಕೆ?

೪. ಸಂಜೆ ಮನೆಗೆ ಮರಳುವ ಗೋಪಾಲನ ಭಯಕ್ಕೆ ಕಾರಣವೇನು?

೫. ಬನದ ಗೋಪಾಲ ಯಾರು?

೬. ಯೋಗಿಯ ಸಾಧನೆಯನ್ನು ಮೀರಿದ್ದು ಯಾವುದು?

**ತಲೆಬಾಗಿ ಬದುಕುವುದಕ್ಕಿಂತಲೂ, ನೆಟ್ಟಗೆ ನಿಂತು ಸಾಯುವುದು ಮೇಲು – ಥಾಮಸ್ ಪುಲ್ಲರ್.**

**II. ಈ ಪ್ರಶ್ನೆಗಳಿಗೆ ೩-೪ ವಾಕ್ಯಗಳಲ್ಲಿ ಉತ್ತರಿಸಿ.**

೧. ಮಗನು ಬೇಗನೆ ಏಳಬೇಕೆಂದು ತಾಯಿ ಬಯಸುವುದೇಕೆ?

೨. ತಾಯಿಯು ಜೊತೆಗಿದ್ದರೆ ಬನವೇ ಸೊಗಸು ಎಂದು ಮಗನಿಗನಿಸಿದ್ದು ಏಕೆ?

೩. ತಾಯಿಗೆ ಬಡತನದ ನೆನಪಾದುದು ಯಾವಾಗ?

೪. ದೇವರನ್ನು ತಿಳಿಯಲು ಕಷ್ಟಪಡುವವರು ಯಾರು?

**III. ಸಂದರ್ಭದೊಂದಿಗೆ ಅರ್ಥವಿಶೇಷವನ್ನು ಬರೆಯಿರಿ**

೧. ಸಾವಿರಾರು ಮಳೆಬಿಲ್ಲುಗಳು ಸೇರಿ ಕುಣಿದಂತೆ ತೋರುತ್ತಿತ್ತು.

೨. ಆ ಗೋಪಾಲ ಕೊಡಬೇಕು, ನಾವು ಉಣಬೇಕು.

೩. ಆ ಮಗುವಿಗೆ ಬಡತನದ ಬವಣೆಯೇಕೆ?

೪. ಒಲುಮೆಗೆ ಸೆರೆಯಾಗುವೆನು.

೫. ಅಮ್ಮನ ಮಾತು ಸುಳ್ಳಾಗಲಾರದು!

**IV. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರಿಸಿ**

೧. ಗೋಪಾಲನಲ್ಲಿ ತಾಯಿಗಿರುವ ಪ್ರೀತಿಯ ಕುರಿತು ಬರೆಯಿರಿ.

೨. ಈ ಪಾಠದಲ್ಲಿ ಬಂದ ಪ್ರಕೃತಿಯ ವರ್ಣನೆಯ ಕುರಿತು ಬರೆಯಿರಿ.

೩. ಬನದ ಗೋಪಾಲನ ಹಾಡಿನ ಸಾರವನ್ನು ಬರೆಯಿರಿ.



### ಭಾಷಾಭ್ಯಾಸ

**೧. ಈ ಪದಗಳ ಸಂಸ್ಕೃತ ರೂಪವನ್ನು ಬರೆಯಿರಿ.**

ಸಿರಿ, ಬನ, ಮಲ್ಲಿಗೆ, ಸಂಪಿಗೆ, ಹಕ್ಕಿ, ಸಂಜೆ, ಜನುಮ, ಯೋಗಿ, ಭಕ್ತಿ, ಬಿತ್ತರ.

**೨. ಇವುಗಳ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

ಕರುಣೆ, ತುದಿ, ಮುದುಡು, ಸ್ವೀಕರಿಸು, ಬೈಗು, ಬಡತನ, ಅಜ್ಞಾನ,

**೩. ಈ ನುಡಿಗಟ್ಟುಗಳನ್ನು ಸ್ವಂತ ವಾಕ್ಯದಲ್ಲಿ ಬಳಸುವುದನ್ನು ಅಭ್ಯಾಸ ಮಾಡಿ.**

ಬಡತನದ ಬವಣೆ, ಒಲುಮೆಗೆ ಸೆರೆಯಾಗು, ಕರುಣೆಯ ಮಳೆಯನ್ನು ಕರೆ,

**೪. ಗೆಳೆಯರೊಂದಿಗೆ ಚರ್ಚಿಸಿ ಇವುಗಳ ವಿಗ್ರಹವಾಕ್ಯವನ್ನು ಬರೆದು ಸಮಾಸವನ್ನು ಹೆಸರಿಸಿ.**

ತಂಗಾಳಿ, ಹಿಮಮಣಿ, ಗಂಜಿಯುಂಡು, ಲಕ್ಷ್ಮೀಶ

**೫. ಸಂಧಿ ವಿಂಗಡಿಸಿ ಸಂಧಿಯ ಹೆಸರನ್ನು ಬರೆಯಿರಿ.**

ಕಂಬನಿ, ಕೋಟ್ಯಂತರ, ಲಕ್ಷ್ಮೀಶ, ಕೊಳಲೂದಿ, ಧೈರ್ಯವಾಗಿ, ಹೆದರಿಕೆಯಾದರೆ

**ತಾಯಿನಾಡಿಗಾಗಿ ಸಾಯುವುದು ಶ್ರೇಷ್ಠ, ಅದಕ್ಕಿಂತಲೂ ಹೆಚ್ಚಿನದು ತಾಯಿ ನಾಡಿಗಾಗಿ ಜೀವಿಸುವುದು – ಹಂಗೇರಿ ನಾಣ್ಣುಡಿ.**

## ಚಟುವಟಿಕೆ

೧) ಈ ನಾಟಕವನ್ನು ಕಥಾ ರೂಪದಲ್ಲಿ ಬರೆಯಿರಿ.

೨) ಈ ನಾಟಕವನ್ನು ತರಗತಿಯಲ್ಲಿ ಅಭಿನಯಿಸಿ ತೋರಿಸಿ.

೩) 'ನನ್ನ ಗೋಪಾಲ' ಕೃತಿಯನ್ನು ಗ್ರಂಥಾಲಯದಿಂದ ಪಡೆದು ಓದಿ. ತರಗತಿಯಲ್ಲಿ 'ಓದು ನಾಟಕ'ವನ್ನಾಗಿ ಅಭಿನಯಿಸಿ.

## ಪ್ರಬಂಧ ರಚನೆ

ಅರ್ಥಪೂರ್ಣವಾದ ವಿಷಯಗಳಿಂದ, ಸುಸಂಬದ್ಧವಾದ ವಿಷಯ ಪ್ರತಿಪಾದನೆಯಿಂದ ಆಸಕ್ತಿದಾಯಕವಾದ ಆರಂಭದಂತೆಯೇ ಕ್ರಮಬದ್ಧವಾದ ಮುಗಿತಾಯದಿಂದ, ವಿಷಯಕ್ಕೆ ಸೂಕ್ತವಾದ ಪದವಿನ್ಯಾಸ (ಶೈಲಿ) ಬಂಧದಿಂದ ಕೂಡಿದ ವ್ಯವಸ್ಥಿತವಾದ ಬರೆಹವೇ ಪ್ರಬಂಧ.

ಒಂದು ಪರಿಪೂರ್ಣವಾದ ಪ್ರಬಂಧಕ್ಕೆ ಒಳ್ಳೆಯ ಆರಂಭಬೇಕು; ಅದೇ ಪೀಠಿಕೆ, ವಿಷಯ ಪ್ರವೇಶ. ಮುಂದಿನ ಹಂತದಲ್ಲಿ ಕ್ರಮಬದ್ಧವಾದ ವಿಷಯ ವಿಸ್ತರಣೆ. ಕೊನೆಯ ಭಾಗವಾಗಿರುವ ಉಪಸಂಹಾರವು ಅಥವಾ ಮುಗಿತಾಯದ ಭಾಗವು ನಿರೀಕ್ಷೆ, ನಿರ್ಣಯ, ಸಮರ್ಥನೆ, ಸವಾಲು ಇವುಗಳಲ್ಲಿ ಯಾವುದಾದರೊಂದನ್ನು ಹೊಂದಿರಬೇಕು. ಪೀಠಿಕೆ ಇತ್ಯಾದಿ ಉಪಶೀರ್ಷಿಕೆಯನ್ನು ನೀಡಬೇಕಾಗಿಲ್ಲ. ಸಹಜವಾಗಿಯೇ ಮೊದಲ ವಾಕ್ಯವೃಂದವು ಪೀಠಿಕೆ ಹಾಗೂ ಕೊನೆಯ 'ಪ್ಯಾರ'ವು ಮುಗಿತಾಯದ ಭಾಗವೇ ಆಗಿರುತ್ತದೆ.

ಆದಿ, ಅಂತ್ಯಗಳ ನಡುವೆ ಬರುವ ವಿಷಯದ ಪ್ರತಿಪಾದನೆಯು ಸಾರವತ್ತಾಗಿದ್ದು ಸಮಗ್ರವಾದ ಮಾಹಿತಿಯು, ಸಂಕ್ಷಿಪ್ತವಾಗಿ ಅದರಲ್ಲಿರಬೇಕು. ಅದು ವಿಷಯದ ಸಮರ್ಥನೆ, ವ್ಯಾಖ್ಯಾನ, ವಿವರಣೆ, ಉದಾಹರಣೆ, ಪೂರಕ ಮಾಹಿತಿ, ಅಂಕಿಅಂಶಗಳಿಂದ ಸಾಧ್ಯವಾದಷ್ಟು ಸತ್ಯಕ್ಕೆ ಹತ್ತಿರವಾಗಿರಬೇಕು; ಅನವಶ್ಯಕ ಉತ್ಪ್ರೇಕ್ಷೆ ಬೇಡ. ಇದಕ್ಕಾಗಿ ವಿಷಯದ ಬಗ್ಗೆ ಖಚಿತಮಾಹಿತಿ ಇರಬೇಕು. ಅದನ್ನು ನಿರಂತರ ಓದಿನಿಂದ, ಓದಿದ್ದನ್ನು ನಿರಂತರ ಟಿಪ್ಪಣಿ ರೂಪದಲ್ಲಿ ದಾಖಲಿಸಿಕೊಳ್ಳುವುದರಿಂದ ಪಡೆದುಕೊಳ್ಳಬಹುದು.

ಸಮಕಾಲೀನ ಸಮಸ್ಯೆಗಳ ಬಗ್ಗೆ ನಿಮ್ಮ ಗಮನವಿರಲಿ. ಭ್ರಷ್ಟಾಚಾರ, ಪ್ರಜಾಪ್ರಭುತ್ವ, ಮಾನವೀಯತೆ, ಯುವಶಕ್ತಿ, ದೇಶಾಭಿಮಾನ, ಪರಿಸರ, ಸ್ತ್ರೀಸಮಾನತೆ, ಸಂಸ್ಕೃತಿ, ನಿರುದ್ಯೋಗ, ಭಾಷಾಪ್ರೇಮ ಇತ್ಯಾದಿ ವಿಷಯಗಳ ಕುರಿತು ಸಮೂಹ ಮಾಧ್ಯಮಗಳಲ್ಲಿ ಬರುತ್ತಿರುವ ಭಾಷಣ-ಲೇಖನ-ಚರ್ಚೆ ಇತ್ಯಾದಿಗಳನ್ನು ಕುತೂಹಲದಿಂದ ಗಮನಿಸುತ್ತ ಇರಿ. ಇದರಿಂದ ಯಾವುದೇ ವಿಷಯಗಳ ಬಗ್ಗೆ ಕಿರುಪ್ರಬಂಧ ಬರೆಯಲು ಸಮರ್ಥರಾಗಬಹುದು.

**ಗಾದೆ ಮಾತುಗಳ ವಿಸ್ತರಣೆ:** ಇದೂ ಪ್ರಬಂಧವೆ. ಇಲ್ಲೂ ಆದಿ-ಅಂತ್ಯದ ಭಾಗವಿದ್ದು ನಡುವೆ ಗಾದೆ ಮಾತಿನ ಅರ್ಥ ವಿವರಣೆ ಇರುತ್ತದೆ. ಬುದ್ಧಿಜನ್ಯವಾದ ವೇದದ ಮಾತಿಗಿಂತಲೂ ಅನುಭವದಿಂದ ಮೂಡಿಬಂದ ಗಾದೆ ಮಾತುಗಳಲ್ಲಿ ಮೇಲ್ನೋಟದಲ್ಲಿರುವ ಅರ್ಥಕ್ಕಿಂತ ಭಿನ್ನವಾದ, ವಿಶೇಷವಾದ ಅರ್ಥ ಇರುತ್ತದೆ. 'ಕೈಕೆಸರಾದರೆ ಬಾಯಿ ಮೊಸರ'ಲ್ಲಿ ಕಾಯಕದ ಮಹತ್ವವಿದೆ. 'ಹಾಸಿಗೆ ಇದ್ದಷ್ಟೇ ಕಾಲುಚಾಚು' ಎಂಬುದರಲ್ಲಿ ಗಳಿಕೆಗಿಂತ ಹೆಚ್ಚಿನ ಖರ್ಚು ಮಾಡದಿರು ಎಂಬ ನೀತಿ ಇದೆ. ಹಾಗೆಯೇ 'ಆಳಾಗಿ ದುಡಿಯಬಲ್ಲವ ಅರಸಾಗಿ ಆಳಬಲ್ಲ', 'ಎತ್ತಿಗೆ ಜ್ವರ ಎಮ್ಮೆಗೆ ಬರೆ', ಇತ್ಯಾದಿ ಗಾದೆಗಳಲ್ಲಿರುವ ವಿಶೇಷ ಅರ್ಥವನ್ನು ಗಮನಿಸಿ.

**ನಿಮ್ಮ ಗುಡಾರಗಳು ಬೇರೆ ಬೇರೆಯಾಗಿರಲಿ, ಆದರೆ ನಿಮ್ಮ ಹೃದಯಗಳು ಒಂದಾಗಿರಲಿ – ಅರೇಬಿಯಾ ನಾಣ್ಣುಡಿ.**

ಈ ವಿವರಣೆಗಳೊಂದಿಗೆ ಆ ಗಾದೆ ಹುಟ್ಟಿಕೊಂಡ ಸಂದರ್ಭ, ಅದೇ ಅರ್ಥದ ಬೇರೆ ಗಾದೆಗಳು, ಅದನ್ನು ಅನ್ವಯಿಸಿಕೊಳ್ಳಬೇಕಾದ ರೀತಿ ಇತ್ಯಾದಿಗಳನ್ನು ಗಾದೆ ಮಾತಿನ ವಿಸ್ತರಣೆಯಲ್ಲಿ ಬರೆಯಬೇಕಾಗುತ್ತದೆ. ವಿವರಣೆ ರೂಪದಲ್ಲಿರುವ ಈ ಬರೆಹವು ಹೀಗೆಯೇ ಇರಬೇಕು ಎಂದೇನೂ ಇಲ್ಲ. ಅವರವರ ಶೈಲಿ, ಹೇಳುವ ರೀತಿಗಳಿಂದ ಬೇರೆ ಬೇರೆ ರೂಪಗಳನ್ನು ಪಡೆದುಕೊಳ್ಳುವುದುಂಟು. ಮಾದರಿಯಾಗಿ ಈ ಗಾದೆಯನ್ನು ಗಮನಿಸಿ;

**ತಾ ಕಳ್ಳ – ಪರರ ನಂಬ**

ಕವಿರಾಜ ಮಾರ್ಗಕಾರ ಹೇಳಿದಂತೆ ಯಾವುದರ ಕುರಿತು ಓದದೆಯೂ ಕಾವ್ಯರಚಿಸುವ ಕುಶಲಿಗರು ನಮ್ಮ ಹಿಂದಿನವರು. ಅದಕ್ಕೆ ಜನಪದ ಸಾಹಿತ್ಯ ಸಾಕ್ಷಿ. ಅದರ ಒಂದು ಭಾಗ – ಗಾದೆ ಮಾತು. ಕನ್ನಡಿಯಲ್ಲಿ 'ಕರಿ'ಯು ಅಡಗಿದಂತೆ ನಾಲ್ಕಾರು ಪದಗಳ ಪುಟ್ಟ ಗಾದೆಯ ಮಾತಲ್ಲಿ ಹಳ್ಳಿಜನರ ಅಪಾರ ಅನುಭವದ ಸಾರ ತುಂಬಿದೆ. ತಮ್ಮ ಬದುಕಿನ ಹೋರಾಟದ ಕಾಲದಲ್ಲಿ ತಾವು ಅನುಭವಿಸಿದ ಸುಖ, ದುಃಖ, ಬೇಗೆ, ದುಮ್ಮಾನ, ದಿನನಿತ್ಯದ ಜೀವನ ಸಂಘರ್ಷ ಇತ್ಯಾದಿಗಳನ್ನು ಗಾದೆಯ ಪುಟ್ಟ ವಾಕ್ಯದಲ್ಲಿ ತುಂಬಿಸಿದ್ದಾರೆ. ಹತ್ತು ಕಟ್ಟುವ ಕಡೆ ಒಂದು ಮುತ್ತನ್ನು ಕಟ್ಟು ಎನ್ನುವಂತೆ ಗಾದೆಗಳನ್ನು ರಚಿಸಿದ್ದಾರೆ. ಹೀಗಾಗಿ ಇಂತಹ ಅನುಭವದ ನುಡಿಗಳಿಂದ ಗಾದೆಗಳು ವೇದದ ನುಡಿಗಿಂತಲೂ ಶ್ರೇಷ್ಠವಾಗಿವೆ ಎಂದೆನ್ನಬಹುದು. ಆದುದರಿಂದಲೇ ಅವರು ಹೇಳಿದುದು–'ವೇದ ಸುಳ್ಳಾದರೂ ಗಾದೆ ಸುಳ್ಳಾಗದು'. ಕುಳಿತು ಯೋಚಿಸಿ ಬರೆದ ವೇದಕ್ಕಿಂತಲೂ ಜೀವನದ ಅನುಭವ ಸಾರವೇ ಆದ ಗಾದೆ ಮಾತು ಹೆಚ್ಚಿನದು ಎಂದು ಎನಿಸಿದ್ದರೆ ಅಚ್ಚರಿ ಇಲ್ಲ. ಅವರಿಗೆ ಗಾದೆ ಮಾತು ನೂರಕ್ಕೆ ನೂರು ಸತ್ಯ, ಅನುಸರಿಸಲು ಅರ್ಹ, ಅಂತಹ ಅರ್ಥಪೂರ್ಣ ಗಾದೆಗಳಲ್ಲಿ ಒಂದು :– ತಾ ಕಳ್ಳ ಪರರ ನಂಬ.



ಸಹಜವಾಗಿಯೇ ಮನುಷ್ಯನ ಗುಣಗಳಲ್ಲಿ ಒಂದು–ತನ್ನಂತೆಯೇ ಇತರರು ಎಂದು ಭಾವಿಸುವುದು. ಆದರೆ ಅದು, ಸರ್ವಜ್ಞನೆಂದಂತೆ 'ತನ್ನಂತೆ ಬಗೆದೊಡೆ ಕೈಲಾಸಬಿನ್ನಾಣವಕ್ಕು' ಎಂಬಂತಾದರೆ ಲೇಸು. ಆದರೆ ಹಾಗೆ ಒಳ್ಳೆಯದಾಗಿ ಭಾವಿಸುವವರು ಕಡಿಮೆ. ಇನ್ನೊಮ್ಮೊಬಾರಿ ತಮಗೆ ಸಲ್ಲದ್ದನ್ನು ಸಮರ್ಥಿಸಿಕೊಳ್ಳಲು ತನ್ನದೇ ದುರ್ಗುಣಗಳನ್ನು ಇನ್ನೊಬ್ಬರಲ್ಲಿ ಕಾಣುವುದುಂಟು. ಕಳ್ಳನಾದವನಿಗೆ ಇನ್ನೊಬ್ಬರಲ್ಲಿ ತನ್ನದೇ ವರ್ತನೆ, ಮಾತು, ಇತ್ಯಾದಿಗಳನ್ನು ಕಂಡಾಗ ಆತನೂ ಕಳ್ಳನೇ ಎಂದೆನಿಸುತ್ತದೆ. ಯಾವಾಗ ಹಾಗೆನ್ನಿಸಿತೋ ಮತ್ತೆ ಅವರನ್ನು ಈತ ನಂಬುವುದೇ ಇಲ್ಲ. ಸಹಜವಾಗಿಯೇ ಕಳ್ಳನಿಗೆ ಸಂಶಯ ಕಾಡುತ್ತದೆ. ಯಾವಾಗ ಈ ಅನುಮಾನದ ಹುಳು ತಲೆಹೊಕ್ಕಿತೋ ಆವಾಗಿನಿಂದ ಆ ಇನ್ನೊಬ್ಬನನ್ನು ಕಳ್ಳನೆಂದೇ ಭಾವಿಸಿಬಿಡುತ್ತಾನೆ. ಆದರೆ ಒಬ್ಬ ಸಜ್ಜನನಿಗೆ ಆ ಇನ್ನೊಬ್ಬನು ದಿಟದ ಕಳ್ಳನೇ ಆಗಿದ್ದರೂ ಅನುಮಾನ ಕಾಡದು. ಅವನ ಬಗ್ಗೆ ಸಜ್ಜನನು ಒಳ್ಳೆಯದನ್ನೆ ಆಲೋಚಿಸುತ್ತಾನೆ; ಕಾಣುತ್ತಾನೆ.

ಹೀಗೆ ವಿನಾಕಾರಣ ಇನ್ನೊಬ್ಬರನ್ನು ಅನುಮಾನದ ದೃಷ್ಟಿಯಿಂದ ಕಾಣುವ ಪ್ರವೃತ್ತಿಯವನನ್ನು 'ತಾಕಳ್ಳ ಪರರ ನಂಬ' ಎಂಬ ಗಾದೆಯ ಮಾತಿನಿಂದ ಗುರುತಿಸುವುದಿದೆ.

ಆದುದರಿಂದ ಇತರರನ್ನು ಅನುಮಾನದಿಂದ ಕಾಣುವ ವ್ಯಕ್ತಿಯ ಸ್ವಭಾವವನ್ನು ಸುಲಭದಲ್ಲಿ ನಾವು ಅರ್ಥಮಾಡಿಕೊಳ್ಳಬಹುದಲ್ಲವೇ? ಅದಕ್ಕೆ ಆಸ್ಪದ ಕೊಡದ ಹಾಗೆ ಎಲ್ಲರನ್ನು ಸಜ್ಜನರೆಂದು ಗೌರವಿಸುವ ಸಕಾರಾತ್ಮಕ ಧೋರಣೆಯನ್ನು ನಾವು ತಾಳೋಣ.



**ಮಾತಿನಲ್ಲಿ ವಿನಯ, ನಡತೆಯಲ್ಲಿ ಸ್ಪಷ್ಟತೆ, ಕೃತಿಯಲ್ಲಿ ದೃಢತೆ–ಹೀಗೆ ಮೂರು ಗುಣವಿರುವವರು ಏನನ್ನೂ ಸಾಧಿಸಬಹುದು–ಥಾಮಸ್‌ಪುಲ್ಲರ್.**

**ಪದ್ಯ ಭಾಗ**

# ಪದ್ಯ – ೧

# ಅರಿವು

– ಸುಕನ್ಯಾಮಾರುತಿ

**ಪಾಠ ಪ್ರವೇಶ:** ಹೊಸಗನ್ನಡ ಸಾಹಿತ್ಯವು ಆಯಾಕೃತಿಕಾರರ ಚಿಂತನೆ, ಆಲೋಚನೆ. ನಿರೀಕ್ಷೆ, ಬಯಸುವ ಬದಲಾವಣೆಗಳಿಗೆ ಅನುಗುಣವಾಗಿ ನವೋದಯ, ನವ್ಯ, ಬಂಡಾಯ, ದಲಿತ, ಸ್ತ್ರೀವಾದಿಗಳೆಂಬ ಪ್ರಕಾರಗಳನ್ನು ಹೊಂದಿದೆ. ಎಲ್ಲ ಬಗೆಯ ಸಾಹಿತ್ಯವೂ ಮಾಡುವ ಪರಿಣಾಮ ಬಹುಮಟ್ಟಿಗೆ ಒಂದೇ ಆಗಿದ್ದರೂ ಯಾರು ಇದನ್ನು ಬರೆದಿದ್ದಾರೆ, ಅದರ ವಸ್ತು ಯಾವುದು ಎಂಬುದರ ಮೇಲೆ ಮೇಲಿನ ವರ್ಗೀಕರಣ ನಡೆದಿದೆ. 'ನೊಂದ ನೋವನು ನೋಯದವರು ಎತ್ತಬಲ್ಲರು' ಎಂದಾಡಿದ ಅಕ್ಕಮಹಾದೇವಿಯು ಸ್ತ್ರೀವಾದಿ ಚಿಂತನೆಯ ಮೊತ್ತ ಮೊದಲ ಮಹಿಳೆ. ಅವಳ ಆಲೋಚನೆಯಂತೆಯೇ ದಲಿತರಷ್ಟೇ ದಲಿತರ ಕಷ್ಟ–ಕಾರ್ಪಣ್ಯ, ಶೋಷಣೆ ಇತ್ಯಾದಿಗಳನ್ನು ಹೇಳಿಕೊಳ್ಳಬಲ್ಲರು. ಅಂತೆಯೇ ಮಹಿಳೆಯೂ ಸಹ. ಧರ್ಮ, ಸಂಪ್ರದಾಯ, ಕಟ್ಟುಪಾಡುಗಳ ಹೆಸರಲ್ಲಿ, ಅಬಲೆ ಎಂಬ ತಾತ್ಸಾರದಲ್ಲಿ ಅಸಹಾಯಕಳಾದವಳು ಇಂದು ವಿದ್ಯೆಯಿಂದ, ಅರಿವಿನಿಂದ ಪ್ರೋತ್ಸಾಹದಿಂದ ತನಗೆ ಆಗುತ್ತಿರುವ ಅನ್ಯಾಯಗಳನ್ನು ಪ್ರತಿಭಟಿಸಿ ತನ್ನ ಇರುವಿಕೆಯನ್ನು ಸಾಧಿಸಿ ತೋರಿಸುವ ಹಂತಕ್ಕೆ ಬಂದಿದ್ದಾಳೆ. ಅಡುಗೆಮನೆಯ ಸೀಮಿತ ಪರಿಧಿಯಿಂದ ಹೊರಬಂದು ವಿಶಾಲಪ್ರಪಂಚದಲ್ಲಿ ತನ್ನ ಇರುವನ್ನು ದಾಖಲಿಸುವಂತಾಗಿದ್ದರೆ ಅದಕ್ಕೆ ಕಾರಣ ಶಿಕ್ಷಣ.



ಮಹಾಮನೆಯ
ನಿತ್ಯ ದಾಸೋಹಕ್ಕೆ
ಬೇಯಿಸಿ, ಬಡಿಸಿ,
ಸೋತು ಸುಣ್ಣವಾಗಿ
ಕೋಣೆ ಸೇರಿ, ಹಣ್ಣಾದ ಮೈಯ
ಹಾಸಿಗೆಯಲ್ಲಿ ಚೆಲ್ಲಿ
ತುಂಬಾ ಹೊದ್ದು ಮಲಗುತ್ತೇನೆ.

ಇದ್ದಕ್ಕಿದಂತೆ ಏನೋ
ಕಳೆದುಕೊಂಡಂತೆನಿಸಿ,
ಮೈಯೆಲ್ಲಾ ಮುಟ್ಟಿ ಮುಟ್ಟಿ
ನೋಡಿಕೊಂಡಾಗ,
ನನ್ನ ಇರುವಿಕೆಯ
ಅರಿವೇ ಆಗದೆ
ಗಾಬರಿಯಾಗುತ್ತದೆ.

ಮಾಡಿದುದೆಲ್ಲವನ್ನು ಕಾಲ ಹಾಳು ಮಾಡುತ್ತದೆ; ಆದರೆ ಮಾಡಬೇಕಾದುದನ್ನೆಲ್ಲಾ ನಾಲಗೆ ಹಾಳುಮಾಡುತ್ತದೆ–ಜರ್ಮನಿಯ ನಾಣ್ಣುಡಿ.

ಹಾಗಾದರೆ ನಾನಿಲ್ಲವೆ?
ಕಿರುಚಿ ಬಿಡಬೇಕೆನಿಸುತ್ತದೆ.
ಇದ್ದೀ, ನೀನು ಇದ್ದೀ,
ನೀನು ಇರಬೇಕು,
ಇರಲೇಬೇಕು;
ಅಂತರಾತ್ಮ ಚೀರಿದಾಗ,

ಝುಗ್ಗನೆದ್ದು ಹೊದಿಕೆ ಝಾಡಿಸಿ
ಮಹಾಮನೆಯ ಎಂಜಲೆಲೆ
ಪಂಕ್ತಿಯನ್ನು ಸರಸರನೆ ದಾಟಿ
ಕಾಲ್ತೊಳೆದುಕೊಂಡು,
ಮಹಾದ್ವಾರದಿಂದ ಹೊರಬಿದ್ದು,
ಸ್ವಚ್ಛವಾದ ರಾಜಬೀದಿಗುಂಟ
ಸಾಗಿ ಮೈದಾನ ತಲುಪಿ
ಅದರ ವೈಶಾಲ್ಯ ಕಂಡಾಗ,

ಮಹಾಮನೆಯ ಸಣ್ಣತನ
ಗೊತ್ತಾಗಿಹೋಗುತ್ತದೆ.
ಆನಂದದಿಂದ ಕಣ್ಮುಚ್ಚಿದಾಗ
ನನ್ನ ಇರುವಿಕೆಯ
ಅರಿವಾಗುತ್ತದೆ.



**ಕವಿ ಪರಿಚಯ :**



ದಲಿತ–ಬಂಡಾಯ ಕಾವ್ಯಮಾರ್ಗದ ಪ್ರಮುಖ ಕವಿಗಳಲ್ಲಿ ಒಬ್ಬರಾದ ಸುಕನ್ಯ ಮಾರುತಿಯವರು ಬಳ್ಳಾರಿ ಜಿಲ್ಲೆಯ ಕೊಟ್ಟೂರಲ್ಲಿ ೧೯೫೬ ರಲ್ಲಿ ಜನಿಸಿದರು. ಕರ್ನಾಟಕ ವಿಶ್ವವಿದ್ಯಾನಿಲಯದ ಎಂ.ಎ. ಪದವೀಧರೆ, ಧಾರವಾಡದ ಜೆ.ಎಸ್.ಎಸ್ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕಿ. ಪರಿಸದಲ್ಲಿ, ಪಂಚಾಗ್ನಿ ಮಧ್ಯ, ನಾನು–ನನ್ನವರು, ತಾಜಮಹಲಿನ ಹಾಡು, ಬಿಂಬದೊಳಗಣ ಮಾತು, ನಾನೆಂಬ ಮಾಯೆ–ಇವು ಇವರ ಕವನ ಸಂಕಲನಗಳು... 'ಅರಿವು' ಕವನವನ್ನು 'ನಾನೆಂಬ ಮಾಯೆ' ಸಂಕಲನದಿಂದ ಆರಿಸಿಕೊಳ್ಳಲಾಗಿದೆ.

**ಯಶಸ್ಸಿನ ಮೂಲಭೂತ ತತ್ತ್ವವೇನೆಂದರೆ ಹಿಡಿದ ಕೆಲಸವನ್ನು ಬಿಡದೆ ಮಾಡುವುದು – ವಾಲ್ಟೇರ್.**

### ಅರ್ಥ ತಿಳಿಯಿರಿ :

**ದಾಸೋಹ**–ಶಿವಭಕ್ತರಿಗೆ ಮಾಡುವ ಆರೋಗಣೆ, ಊಟ. **ಹಣ್ಣಾಗು**–ಬಳಲು, ಸೊರಗು. **ಝಾಡಿಸು**–ಒದರು, ಕೊಡಹು. **ಗುಂಟ**–ಅನುಸರಿಸು, ಹಿಡಿದು. **ವೈಶಾಲ್ಯ**– ವಿಶಾಲತೆ.

### ಗಮನಿಸಿ

**ಮಹಾಮನೆ:** ಬಸವಣ್ಣನವರ ಮನೆ. ಇಲ್ಲಿ ಶರಣರೆಲ್ಲ ಸೇರಿ ತಮ್ಮ ತಮ್ಮ ಅಡುಗೆ ಮಾಡಿ ಸಾಮೂಹಿಕವಾಗಿ ಉಣ್ಣುತ್ತಿದ್ದರು. ನಿತ್ಯ ದಾಸೋಹ ನಡೆಯುವ ಈ ಮನೆಯಲ್ಲಿ ಎಲ್ಲರಿಗೂ ಮುಕ್ತಪ್ರವೇಶವಿತ್ತು. ಈ ಮನೆಯು ಬಸವಣ್ಣನವರ ಆದರ್ಶಗಳ ಸಂಕೇತವೂ ಹೌದು.

## ಅಭ್ಯಾಸ

**I. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ನಿತ್ಯ ದಾಸೋಹ ಎಂದರೇನು?

೨. ಮೈ ಹಣ್ಣಾಗಲು ಕಾರಣವೇನು?

೩. ಮೈಯನ್ನು ಮುಟ್ಟಿಕೊಂಡಾಗ ಗಾಬರಿಯಾಗುವುದೇಕೆ?

೪. ಅಂತರಾತ್ಮ ಏನೆಂದು ಚೀರುತ್ತದೆ

**II. ಈ ಪ್ರಶ್ನೆಗಳಿಗೆ ೩–೪ ವಾಕ್ಯಗಳಲ್ಲಿ ಉತ್ತರಿಸಿ**

೧. ಬಸವಣ್ಣನವರ ಮಹಾಮನೆಗೂ 'ಅರಿವು' ಕವಿತೆಯ ಕವಯಿತ್ರಿಯ ಮಹಾಮನೆಗೂ ಸಾಮ್ಯ ಯಾವುದು?

೨. ಅಂತರಾತ್ಮವು ಯಾವಾಗ ಕಿರುಚಿಕೊಳ್ಳುತ್ತದೆ?

೩. ಕವಯಿತ್ರಿಗೆ ತನ್ನ ಇರುವಿಕೆಯ ಅರಿವಾಗುವುದು ಯಾವಾಗ?

೪. ಮಹಾಮನೆಯ ಸಣ್ಣತನ ಗೊತ್ತಾಗಿ ಹೋಗುತ್ತದೆ ಎಂದರೇನು?

**III. ಸಂದರ್ಭದೊಡನೆ ವಿಶೇಷ ಅರ್ಥವನ್ನು ಬರೆಯಿರಿ**

೧. ಹಾಗಾದರೆ ನಾನಿಲ್ಲವೇ?

೨. ಇದ್ದೀ, ನೀನು ಇದ್ದೀ, ನೀನು ಇರಬೇಕು

೩. ನನ್ನ ಇರುವಿಕೆಯ ಅರಿವಾಗುತ್ತದೆ

**ಅದೃಷ್ಟದ ಮೂಲಕ ಜ್ಞಾನವನ್ನು ಪಡೆಯಲು ಸಾಧ್ಯವಿಲ್ಲ;ಆದರೆ ಜ್ಞಾನದ ಮೂಲಕ ಅದೃಷ್ಟವನ್ನು ಪಡೆಯಬಹುದು–ಅಮೇರಿಕಾದ ನಾಣ್ಣುಡಿ.**

**IV**. **ಸುಮಾರು ೮–೧೦ ವಾಕ್ಯಗಳಲ್ಲಿ ಉತ್ತರಿಸಿ**

೧. ಮೈದಾನದ ವೈಶಾಲ್ಯವು ಕವಿತೆಯ ನಾಯಕಿಗೆ ಆತ್ಮಸ್ಥೈರ್ಯವನ್ನು ಹೇಗೆ ತಂದುಕೊಟ್ಟಿತು?

೨. ನಿತ್ಯ ದುಡಿಮೆಯ ಹೆಣ್ಣಿನ ನೋವು–ನಲಿವು 'ಅರಿವು' ಕವಿತೆಯಲ್ಲಿ ಹೇಗೆ ವರ್ಣಿತವಾಗಿದೆ?

## ಭಾಷಾಭ್ಯಾಸ

ಛಂದಸ್ಸು, ಅಲಂಕಾರ ಇತ್ಯಾದಿಗಳಿಂದ ಕೂಡಿದ್ದ ಪ್ರಾಚೀನ ಕಾವ್ಯ ಮಾರ್ಗಕ್ಕಿಂತ ಭಿನ್ನವಾದದ್ದು ಆಧುನಿಕ ಕಾವ್ಯಪ್ರಕಾರ, ನವ್ಯ, ನವ್ಯೋತ್ತರದಲ್ಲಿ ಗಣನಿಯಮ ಇಲ್ಲದಿದ್ದರೂ ಲಯಕ್ಕೆ ಪ್ರಾಧಾನ್ಯ ಇದೆ. ಇಲ್ಲಿ ಅರ್ಥವೇ ಪ್ರಧಾನ. ಆದು ರೂಪಕದಿಂದ ಆಗುತ್ತದೆ. ಈ ಕವನದಲ್ಲಿ ಅಡುಗೆ ಮನೆಯಲ್ಲಿ ಅವಿರತ ದುಡಿಯುವ ಹೆಣ್ಣಿನ ಸ್ಥಿತಿ–ಗತಿ ಅಂದಿನ ಮಹಾಮನೆಯ ಗರತಿಯರಿಗಿಂತ ಭಿನ್ನವಾಗಿಲ್ಲ– ಬಸವಣ್ಣನವರ ಮಹಾಮನೆಯೆ ಇಲ್ಲಿಯ ಅಡುಗೆಮನೆ. ಮಹಾಮನೆಯ ರೂಪಕವು ಇಲ್ಲಿ ವಿಶಾಲ ಅರ್ಥವನ್ನು ಧ್ವನಿಸುತ್ತದೆ.

## ಚಟುವಟಿಕೆ

೧. ವಿವಿಧ ಪತ್ರಿಕೆಗಳಲ್ಲಿ ಬರುವ ಕವಿತೆಗಳನ್ನು ಓದಿರಿ. ಗದ್ಯದ ಸಾಲಿಗಿಂತ ಭಿನ್ನವಾದ ಕವನದ ಸಾಲುಗಳನ್ನು ಗಮನಿಸಿ

೨. ಇದೇ ರೀತಿಯಾದ ಪದ್ಯಗಳನನ್ನು ಬರೆದು ನಿಮ್ಮ ಶಾಲೆಯ ಭಿತ್ತಿಪತ್ರಿಕೆಯಲ್ಲಿ ಪ್ರದರ್ಶಿಸಿ.





**ಬದುಕನ್ನು ಬೆಳಗಿಸಲು ಪುಸ್ತಕಗಳೇ ದಾರಿದೀಪ – ರವೀಂದ್ರನಾಥ ಠಾಗೋರ್.**

## ಪದ್ಯ–೨

# ನನ್ನ ಹಾಗೆಯೆ

–ಸು.ರಂ. ಎಕ್ಕುಂಡಿ

**ಪಾಠ ಪ್ರವೇಶ :** ರಾಜ್ಯ ವಿಸ್ತರಣಾಕಾಂಕ್ಷಿಯಾದ ಭರತನನ್ನು ತಮ್ಮನಾದ ಬಾಹುಬಲಿಯು ಸೋಲಿಸುತ್ತಾನೆ. ಸೋತ ಅಣ್ಣನಿಗೆ ಗೆದ್ದ ರಾಜ್ಯವನ್ನು ಒಪ್ಪಿಸಿ ತಮ್ಮನು ತಪಸ್ಸನ್ನಾಚರಿಸಲು ತೆರಳುತ್ತಾನೆ. ಆ ಬಳಿಕ ತಾನು ಕಂಡಂತಹ ಬೆಳಕನ್ನು ಜಗತ್ತಿಗೆ ಪರಿಚಯಿಸುತ್ತಾನೆ. ಸ್ವಾರ್ಥ ಮತ್ತು ಅಹಂಕಾರಗಳ ತ್ಯಾಗದ, ಅಹಿಂಸೆಯ ಮೂಲಮಂತ್ರದ, ಭೋಗವನ್ನು ಬಿಟ್ಟು ತ್ಯಾಗಿಯಾಗುವ ಒಂದು ಭವ್ಯತತ್ತ್ವವು ಬಾಹುಬಲಿಯಲ್ಲಿದೆ. ಆ ಭವ್ಯತೆಗೆ ಪ್ರತೀಕವಾಗಿದೆ ಗೊಮ್ಮಟಮೂರ್ತಿ. ಗೊಮ್ಮಟನಿಗೆ ಪ್ರತಿ ಹನ್ನೆರಡು ವರ್ಷದಲ್ಲೊಮ್ಮೆ ಮಹಾಮಸ್ತಕಾಭಿಷೇಕ ನಡೆಯುತ್ತದೆ. ಶ್ರವಣಬೆಳಗೊಳದಲ್ಲಿರುವ ಗೊಮ್ಮಟನ ಮೂರ್ತಿಗಾಗುತ್ತಿರುವ ಮಹಾಮಜ್ಜನವನ್ನು ನೋಡಿದ ಮಗು ತನಗನಿಸಿದುದನ್ನು ನಿರ್ಭಯವಾಗಿ ತನ್ನ ತಾತನಲ್ಲಿ ಹೇಳುವ ಮುಗ್ಧತೆಯು ಈ ಕವನದಲ್ಲಿದೆ.

ಮೊನ್ನೆ ಮೊನ್ನೆ ನಡೆಯಿತಲ್ಲ ಬಾಹುಬಲಿಯ ಮಜ್ಜನ
ಬೆಟ್ಟದಲ್ಲಿ ಕೇಳಿತೊಂದು ಪುಟ್ಟ ಮಗುವು ಅಜ್ಜನ
"ಈತನಾರು ತಾತ ಇಲ್ಲಿ ನಿಂತು ನೋಡುತಿರುವನು
ಇಂದ್ರಗಿರಿಯ ನೆತ್ತಿಯಲ್ಲಿ ಏನು ಮಾಡುತಿರುವನು?"
"ಇವನೆ ಬಾಹುಬಲಿಯು ಮಗು! ಧೀರತನದ ಮೂರ್ತಿಯು!
ನುಡಿಯ ಹೊಳೆಗಳಲ್ಲಿ ತುಂಬಿ ಹರಿವುದಿವನ ಕೀರ್ತಿಯು
ಹತ್ತುವವರ ಇಳಿಯುವವರ ನಿಂತು ನೋಡುತಿರುವನು
ನಿಲ್ಲುವವರ ನಡೆಯುವವರ ಲೆಕ್ಕ ಮಾಡುತಿರುವನು
ಬಳಲಿದವರಿಗೆಲ್ಲ ಇಲ್ಲಿ ಕೈಯ ನೀಡುತಿರುವನು"
"ಇಲ್ಲಿ ಏಕೆ ಬಂದು ನಿಂತ? ಇಷ್ಟು ದೂರ! ಎತ್ತರ!
ಭಯವಾಗದೆ ಇವನಿಗಿಲ್ಲಿ ಯಾರು ಇಲ್ಲ ಹತ್ತಿರ"
"ಇವನಿಗೆಲ್ಲಿ ಭಯವು ಮಗು ಅಭಯಮೂರ್ತಿ ಈತನು
ಭರತ ಚಕ್ರವರ್ತಿ ಇವನ ಅಣ್ಣ ಒಮ್ಮೆ ಆತನು
ಹಮ್ಮಿನಲ್ಲಿ ಬಂದು ಸೆಣಸಿ ತಮ್ಮನಲ್ಲಿ ಸೋತನು
ಗೆದ್ದರಾಜ್ಯ ಮರಳಿಸುತ್ತ ನುಡಿದನೊಂದು ಮಾತನು



ಅನ್ಯಭಾಷೆಯನ್ನು ತೆಗಳುತ್ತಿರುವವನು ತನ್ನ ಭಾಷೆಯಲ್ಲೂ ಅಜ್ಞಾನಿಯಾಗಿರುತ್ತಾನೆ – ಗಯಟೆ.

ನೀನು ಸೋತುಗೆದ್ದೆ ಅಣ್ಣ, ನಾನು ಗೆದ್ದು ಸೋತೆನು
ಬೆಟ್ಟ ಕರೆಯುತಿಹುದು ನನ್ನ ಮುಗಿಲು ತನ್ನ ಹತ್ತಿರ
ಯಾವುದುಂಟು ಅಣ್ಣ ಇಲ್ಲಿ ಜೀವವೇರದೆತ್ತರ?
ತಪಸ್ಸೊಂದೆ ತಿಳಿವುದೊಂದೆ ಹುಟ್ಟು ಸಾವಿನುತ್ತರ.
ನಿಂತು ಹಾಗೆ ನಿಂತುಕೊಂಡು ಘೋರ ತಪವ ಮಾಡಲು
ಹುಟ್ಟು ಸಾವಿನಾಚೆಗಿರುವ ಹೊಳೆವ ಹಾದಿ ನೋಡಲು
ಬಿಸಿಲು ಬಂತು ನೆರಳು ಬಂತು ಗಾಳಿ ಬಿಚ್ಚಿ ಬೀಸಿತು
ಒಮ್ಮೆ ಹಸಿರು ಒಮ್ಮೆ ಹೊನ್ನು ಹಚ್ಚಡವನು ಹಾಸಿತು
ಸೂರ್ಯನೊಮ್ಮೆ ಚಂದ್ರನೊಮ್ಮೆ ಸುತ್ತು ಹಾಕಿ ನಡೆದರು
ದೀಪದಂತೆ ನಿಂತ ಇವಗೆ "ನಮೋ" ಎಂದು ನುಡಿದರು
"ಇಷ್ಟು ಜನರು ಇಲ್ಲಿಗಿಂದು ಏಕೆ ಬಂದು ನೆರೆದರು?
'ಬಾಹುಬಲಿ', 'ಬಾಹುಬಲಿ' ಎಂದು ಕರೆಯುತಿರುವರು"
"ಮಗೂ, ಇಂದು ಇವನಿಗಿಲ್ಲಿ ಹಾಲಿನಲ್ಲಿ ಸ್ನಾನವು
ದಾರಿಯಲ್ಲಿ ದಣಿದ ಇವರಿಗೆ, ಇವನದೊಂದೆ ಧ್ಯಾನವು
ಮುದ್ದುಮುಖದಿ ಮುಗುಳ್ನಕ್ಕು ಸಿದ್ಧನಾಗಿ ನಿಂತಿಹ
ದುಗ್ಧ ಹಾಸದಲ್ಲಿ ನಲಿವ ಮುಗ್ಧ ಮಗುವಿನಂತಿಹ"





ಕಬ್ಬಿಣವು ತುಕ್ಕಿನಿಂದ ನಾಶವಾಗುವಂತೆ ಮಾನವನು ಅಸೂಯೆಯಿಂದ ಹಾಳಾಗುತ್ತಾನೆ – ಟಿ.ಎಸ್.ಫಯಾಸ್.

"ತಾತ,
ಎರೆವ ಮುಂಚೆ ಎಣ್ಣೆ ಹಚ್ಚಿ ಅಮ್ಮ ನನಗೆ ಹೀಗೆಯೇ
ನಿಲ್ಲಿಸುವಳು.  ಬಾಹುಬಲಿಯು ಕೂಡ ತನ್ನ ಹಾಗೆಯೆ
ನಿಂತು ಕಾಯುತಿರುವ ಕಣ್ಣು ತೆರೆದು ಮೊದಲ ಚೆಂಬಿಗೆ"
ಗೊಮ್ಮಟೇಶ ನಕ್ಕುಬಿಟ್ಟ ಕಂಡು ಮುಗ್ಧ ನಂಬಿಗೆ.



**ಸುಬ್ಬಣ್ಣ ರಂಗನಾಥ ಎಕ್ಕುಂಡಿ** : ೧೯೨೩–೧೯೯೫. ಹುಟ್ಟೂರು: ಹಾವೇರಿ ಜಿಲ್ಲೆಯ ರಾಣಿಬೆನ್ನೂರು,  ತಂದೆ–ರಂಗಾಚಾರ್ಯ. ತಾಯಿ– ರಾಜಕ್ಕ. ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖರಲ್ಲೊಬ್ಬರು. ವೃತ್ತಿಯಲ್ಲಿ ಅಧ್ಯಾಪಕರು, ಪ್ರವೃತ್ತಿಯಲ್ಲಿ ಕವಿ, ಕಥೆಗಾರ, ಲೇಖಕ. ಆನಂದ ತೀರ್ಥ, ಸಂತಾನ, ಹಾವಾಡಿಗರ ಹುಡುಗ, ಮತ್ಸ್ಯಗಂಧಿ, ಬೆಳ್ಳಕ್ಕಿಗಳು, ಕಥನ ಕವನಗಳು, **"ಬಕುಳದ ಹೂವುಗಳು"** ಇವು ಇವರ ಕವನ ಸಂಕಲನಗಳು.

**ಪುರಸ್ಕಾರಗಳು:** ಸೋವಿಯತ್‌ಲ್ಯಾಂಡ್ ನೆಹರೂ ಪ್ರಶಸ್ತಿ, ರಾಜ್ಯ ಶಿಕ್ಷಕ ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ ಹಾಗೂ ಬಕುಳದ ಹೂವುಗಳು ಕೃತಿಗೆ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ.

ಪ್ರಸ್ತುತ ಪದ್ಯವನ್ನು **'ಕಥನ ಕವನಗಳು'** ಎಂಬ ಕವನಸಂಗ್ರಹದಿಂದ ಆಯ್ದುಕೊಳ್ಳಲಾಗಿದೆ.



## ಅರ್ಥ ತಿಳಿಯಿರಿ

**ನುಡಿಯ ಹೊಳೆ** – ಮಾತಿನ ರಾಶಿ. **ಮುಗಿಲು** – ಮೋಡ, ಎತ್ತರದ ಸ್ಥಾನ. **ಮಜ್ಜನ**–(ಮಾರ್ಜನ–ಸಂಸ್ಕೃತ)–ಸ್ನಾನ. **ಅಭಯ**–ರಕ್ಷಣೆ. **ಸೆಣಸು**–ಹೋರಾಡು. **ನೆರೆ**–ಗುಂಪುಸೇರು. **ಹಮ್ಮು**–ಅಹಂಕಾರ. **ಹಚ್ಚಡ**–ಹೊದಿಕೆ. **ದುಗ್ಧಹಾಸ**–ಹಾಲುನಗೆ, ಮುಗುಳ್ನಗೆ. **ಚೆಂಬು**–ತಂಬಿಗೆ. **ಮುಗ್ಧ**–ಸರಳ ಸ್ವಭಾವದ.

## ಗಮನಿಸಿ

ಭರತ, ಬಾಹುಬಲಿ ಇವರು ಅಯೋಧ್ಯೆಯ ಅರಸನಾಗಿದ್ದ ವೃಷಭನಾಥನ ಅನೇಕ ಜನ ಮಕ್ಕಳಲ್ಲಿ ಇಬ್ಬರು. ವೃಷಭನಾಥನು ವೈರಾಗ್ಯಪರನಾದಾಗ ತನ್ನ ಮಕ್ಕಳಿಗೆ ರಾಜ್ಯವನ್ನು ಹಂಚಿ ತಪಸ್ಸಿಗೆ ತೆರಳುತ್ತಾನೆ. ಅದರಂತೆ ಅಯೋಧ್ಯೆಯನ್ನಾಳುತ್ತಿದ್ದ ಭರತನ ಶಸ್ತ್ರಾಗಾರದಲ್ಲಿ ಚಕ್ರರತ್ನವು ಹುಟ್ಟಲು ಅದನ್ನು ಮುಂದಿಟ್ಟು ದಿಗ್ವಿಜಯ ಮುಗಿಸಿ ಹಿಂದಿರುಗುತ್ತಿದ್ದಾಗ ಅದು ಅಯೋಧ್ಯೆಯನ್ನು ಪ್ರವೇಶಿಸದೆ ನಿಂತು ಬಿಡುತ್ತದೆ. ಪೌದನಪುರದಲ್ಲಿ ಆಳುತ್ತಿದ್ದ ಬಾಹುಬಲಿಯನ್ನು ಗೆಲ್ಲದೆ ತನ್ನ ಚಕ್ರವರ್ತಿಪಟ್ಟ ಪೂರ್ಣಗೊಳ್ಳದು ಎಂದು ಭರತನು, ಅಣ್ಣನಾದ ತನಗೆ ಶರಣಾಗಬೇಕೆಂದು ತಮ್ಮನಿಗೆ ಸಂದೇಶ ಕಳುಹಿಸುತ್ತಾನೆ. ತಲೆಬಾಗುವುದು

**ಸ್ನೇಹ ಮತ್ತು ಸೌಜನ್ಯದಿಂದ ಮಾನವನನ್ನು ಗೆಲ್ಲಬಹುದೇ ವಿನಾ ಬಲದಿಂದಲ್ಲ – ಅರಿಸ್ಟಾಟಲ್.**

ಅಣ್ಣನಿಗಾದರೂ ಅದು ಅರಸನಾಗಿರುವ ತನ್ನ ಅಭಿಮಾನಕ್ಕೆ ಕುಂದು ಎಂದು ಬಾಹುಬಲಿಯು ಯುದ್ಧಕ್ಕೆ ಸನ್ನದ್ಧನಾಗುತ್ತಾನೆ. ಮಂತ್ರಿಗಳ ಮಾತಿನಂತೆ, ಸೈನಿಕರ ನಾಶದ ಬದಲಿಗೆ ದ್ವಂದ್ವ ಯುದ್ಧಕ್ಕೆ ಇಬ್ಬರೂ ಮನಸ್ಸುಮಾಡಿದರು. ದೃಷ್ಟಿ, ಜಲ, ಮಲ್ಲ ಯುದ್ಧದಲ್ಲಿ ಬಾಹುಬಲಿ ಗೆಲ್ಲುತ್ತಾನೆ. ಆದರೆ ಈ ಗೆಲುವಿನಿಂದ ಪ್ರಯೋಜನವಿಲ್ಲವೆಂದು ಗೆದ್ದರಾಜ್ಯವನ್ನು ಅಣ್ಣನಿಗೆ ಒಪ್ಪಿಸಿ ತಾನು ವೈರಾಗ್ಯಪರನಾಗಿ ತಪಸ್ಸಿಗೆ ತೆರಳುತ್ತಾನೆ, ಗೊಮ್ಮಟೇಶನೆನಿಸುತ್ತಾನೆ.

## ಅಭ್ಯಾಸ

**I. ಖಾಲಿ ಬಿಟ್ಟಿರುವ ಸ್ಥಳಗಳನ್ನು ಸರಿಯಾದ ಪದಗಳಿಂದ ತುಂಬಿರಿ.**

1. ಇವನೆ ಬಾಹುಬಲಿಯು ಮಗು! ಧೀರತನದ ________
2. ನಿಲ್ಲುವವರ ನಡೆಯುವವರ ________ ಮಾಡುತಿರುವನು.
3. ಸೂರ್ಯನೊಮ್ಮೆ ಚಂದ್ರನೊಮ್ಮೆ ಸುತ್ತು ಹಾಕಿ________
4. ಎರೆವ ಮುಂಚೆ ಎಣ್ಣೆ ಹಚ್ಚಿ ಅಮ್ಮ ನನಗೆ ಹೀಗೆಯೇ________
5. ಸು.ರಂ. ಎಕ್ಕುಂಡಿಯವರ ಬಕುಳದ ಹೂವುಗಳು ಕೃತಿಗೆ ದೊರೆತ ಪ್ರಶಸ್ತಿ ____________

**II. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1. ಅಜ್ಜನನ್ನು ಮಗುವು ಏನೆಂದು ಕೇಳಿತು?
2. ಅಜ್ಜನು ಬಾಹುಬಲಿ ಮೂರ್ತಿಯ ಬಗ್ಗೆ ಏನು ಹೇಳಿದನು?
3. ಬಾಹುಬಲಿಗೆ ಭಯವಾಗುವುದಿಲ್ಲವೆ ಎಂದು ಮಗು ಕೇಳಿದುದೇಕೆ?
4. ಮಗುವಿನ ಮುಗ್ಧ ನಂಬಿಕೆಗೆ ಗೊಮ್ಮಟನ ಪ್ರತಿಕ್ರಿಯೆ ಏನು?
5. ಭರತ–ಬಾಹುಬಲಿಯರ ಸೆಣಸಾಟದ ಫಲಿತಾಂಶವೇನು?
6. ಸೂರ್ಯ ಚಂದ್ರರಿಗಿಂತಲೂ ಬಾಹು ಬಲಿಯು ಶ್ರೇಷ್ಠನು. ಹೇಗೆ?

**III. ಈ ಪ್ರಶ್ನೆಗಳಿಗೆ 3–4 ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1. ಬಾಹುಬಲಿಯು ಬೆಟ್ಟದ ಮೇಲೆ ನಿಂತು ಏನು ಮಾಡುತ್ತಿರುವನು?
2. ಬಾಹುಬಲಿಯು ಬೆಟ್ಟದ ಮೇಲೆ ಬಂದು ನಿಲ್ಲಲು ಕಾರಣವೇನು?
3. ಜನರು ಬಾಹುಬಲಿಯ ಬಳಿ ಬಂದು ಏನು ಮಾಡುವರು?
4. ಬಾಹುಬಲಿಯೂ ಮಗುವೂ ಒಂದೇ ಹೇಗೆ?
5. ಬಾಹುಬಲಿಯನ್ನು ಕಂಡು ಮಗುವಿಗೆ ಆಶ್ಚರ್ಯವಾದುದೇಕೆ?

**ಪರರನ್ನು ಅರಿತವನು ಜಾಣ, ತನ್ನನ್ನು ಅರಿತವನೇ ಜ್ಞಾನಿ – ಲಾವೋತ್ಸೆ.**

**IV. ಸಂದರ್ಭದೊಂದಿಗೆ ವಿವರಿಸಿ.**

1. ಇವನೆ ಬಾಹುಬಲಿಯು ಮಗು ಧೀರತನದ ಮೂರ್ತಿಯು!
2. ಹಮ್ಮಿನಲ್ಲಿ ಬಂದು ಸೆಣಸಿ ತಮ್ಮನಲ್ಲಿ ಸೋತನು.
3. ನೀನು ಸೋತು ಗೆದ್ದೆ ಅಣ್ಣ, ನಾನು ಗೆದ್ದು ಸೋತೆನು.
4. ಗೊಮ್ಮಟೇಶ ನಕ್ಕುಬಿಟ್ಟ ಕಂಡು ಮುಗ್ಧ ನಂಬಿಗೆ.
5. ಬಳಲಿದವರಿಗೆಲ್ಲ ಕೈಯ ನೀಡುತಿರುವನು.

**V. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1. 'ನೀನು ಸೋತುಗೆದ್ದೆ. ಅಣ್ಣ, ನಾನು ಗೆದ್ದು ಸೋತೆನು' ಎಂದು ಬಾಹುಬಲಿಯು ಹೇಳಿದ ಪ್ರಸಂಗದ ಸ್ವಾರಸ್ಯವನ್ನು ವಿವರಿಸಿರಿ.
2. ಈ ಕವನದ ಅರ್ಥವನ್ನು ಗದ್ಯ ರೂಪದಲ್ಲಿ ಬರೆಯಿರಿ

## ಭಾಷಾಭ್ಯಾಸ

**1. ಇವುಗಳಿಗೆ ವಿರುದ್ಧಾರ್ಥ ಪದ ಬರೆಯಿರಿ.**

ಭಯ, ಕೀರ್ತಿ, ಹತ್ತು, ದೂರ, ಸೋಲು, ಹುಟ್ಟು.

**2. ಈ ಪದಗಳಿಗೆ ಸಂಸ್ಕೃತ– ತದ್ಭವಗಳನ್ನು ಬರೆಯಿರಿ.**

ಮುಖ, ಮಜ್ಜನ, ಮೂರ್ತಿ, ಮುಗುದ.

**3. ಈ ಪದಗಳನ್ನು ಸ್ವಂತ ವಾಕ್ಯಗಳಲ್ಲಿ ಬಳಸಿರಿ.**

ಧೀರತನ, ಹೊಳೆವಹಾದಿ, ಹಚ್ಚಡ, ಮುಗುಳ್ನಕ್ಕು, ಮುದ್ದುಮುಖ, ಮುಗ್ಧಮಗುವಿನಂತೆ.

**4. ಈ ಪದಗಳನ್ನು ಬಿಡಿಸಿ ಬರೆದು ಸಂಧಿಯ ಹೆಸರು ತಿಳಿಸಿರಿ.**

ಕೇಳಿತೊಂದು, ಸೂರ್ಯನೊಮ್ಮೆ, ಸಾವಿನಾಚೆ, ಯಾವುದುಂಟು, ಭಯವಾಗದೆ, ಗೊಮ್ಮಟೇಶ.

**5. ಈ ಪದ್ಯದಲ್ಲಿರುವ (ಸ್ನಾನವು–ಧ್ಯಾನವು ಎಂಬಂತಹ) ಪ್ರಾಸಪದಗಳನ್ನು ಆರಿಸಿ ಬರೆಯಿರಿ.**



## ಚಟುವಟಿಕೆ

1) "ತಾತ, ಎರೆವ ಮುಂಚೆ ______________________ ಮುಗ್ಧ ನಂಬಿಗೆ"
ಈ ಭಾಗವನ್ನು ಕಂಠಪಾಠ ಮಾಡಿ.

2) ಶ್ರವಣಬೆಳಗೊಳ, ವೇಣೂರು, ಕಾರ್ಕಳ, ಗೊಮ್ಮಟಗಿರಿ ಹಾಗೂ ಶ್ರೀ ಕ್ಷೇತ್ರ ಧರ್ಮಸ್ಥಳ ಇಲ್ಲಿ ಗೊಮ್ಮಟೇಶ್ವರನ ಮೂರ್ತಿಗಳಿವೆ. ಅವುಗಳನ್ನು ನೋಡಿ ಅದರ ಔನ್ನತ್ಯವನ್ನು ಕಣ್ತುಂಬಿಕೊಳ್ಳಿರಿ.

3) ಇಡೀ ಪದ್ಯವನ್ನು ಕಥೆಯ ರೂಪದಲ್ಲಿ ಬರೆಯಿರಿ.



**ಸಚ್ಚಾರಿತ್ರ್ಯದ ಬೆಳವಣಿಗೆಯೇ ಶಿಕ್ಷಣದ ಆಧಾರ ಸ್ತಂಭ – ಮಹಾತ್ಮ ಗಾಂಧಿ.**

## ಪದ್ಯ – ೩

# ಸವಿಚೈತ್ರ

–ಬಸವರಾಜ ಸಾದರ

**ಪಾಠ ಪ್ರವೇಶ :** ಪರಿಧಿಯನ್ನಳೆಯಲು ವೃತ್ತವೊಂದರಲ್ಲಿ ಎಲ್ಲಿಂದ ಆರಂಭಿಸಬಹುದು? ಆದರೆ ಲೆಕ್ಕಹಾಕಲೇ ಬೇಕಿದ್ದರೆ ಎಲ್ಲಿಂದಲಾದರೂ ಆರಂಭಿಸಲೇಬೇಕು. ಹಾಗೆಯೇ ವರ್ಷದ ಆರಂಭಕ್ಕೆ ಎಲ್ಲ ದಿನಗಳೂ ಶ್ರೇಷ್ಠವೇ. ಪಾಶ್ಚಾತ್ಯರು ಜನವರಿ ಒಂದನ್ನು ಹೊಸವರ್ಷದ ಮೊದಲದಿನ ಎಂದು ಭಾವಿಸಿದರೆ, ಭಾರತೀಯರು ಯುಗಾದಿಗೆ ಮಹತ್ವ ನೀಡುತ್ತಾರೆ. ಯುಗಾದಿ ಎಂಬುದು ಹಳತನ್ನು ಮರೆತು, ಬರಲಿರುವ ದಿನಗಳ ಬೇವು ಬೆಲ್ಲವೆರಡನ್ನೂ ಸಮಾನವಾಗಿ ಸ್ವೀಕರಿಸಬೇಕೆಂಬ ಸಂದೇಶವನ್ನು ನೀಡುತ್ತದೆ. ಅದು ಚಾಂದ್ರಮಾನದ್ದೇ ಇರಲಿ, ಸೌರಮಾನದ್ದೇ ಇರಲಿ, ಅದು ಚೈತ್ರಮಾಸದಲ್ಲೆ ಬರುತ್ತದೆ. ಚೈತ್ರವೆಂದರೆ ವಸಂತ, ವಸಂತನೆಂದರೆ ಋತುಗಳ ರಾಜ. ಈ ಋತುವಿನಲ್ಲೇ ಫಲಪುಷ್ಪ ಸಮೃದ್ಧವಾಗಿರುವುದು. ಆದುದರಿಂದ ಅದು ಕವಿಗಳ ಮೆಚ್ಚಿನ ಕಾಲವೂ ಹೌದು. ವಸಂತದ ಸೊಬಗನ್ನು ಬಣ್ಣಿಸದ ಕವಿಯೇ ಇಲ್ಲ. ಕವಿಕಲ್ಪನೆ, ಪದವಿನ್ಯಾಸಗಳಲ್ಲಿ ವ್ಯತ್ಯಾಸ ಇರಬಹುದೇ ಹೊರತು ಎಲ್ಲ ಕವಿಗಳ ನಿರೀಕ್ಷೆ, ಸಂದೇಶಗಳು ಒಂದೇ ಆಗಿರುತ್ತವೆ. ಈ ಕವಿತೆಯಲ್ಲಿ ಅದೇ ಚೈತ್ರದ ವರ್ಣನೆಯನ್ನು ಗಮನಿಸಿ.



ಯುಗದ ಆದಿಯು ಬಂತು ಸೊಗದ ಸುಗ್ಗಿಯ ತಂತು
ಜಗಕೆಲ್ಲ ಹೊಸ ಕಳೆಯು ತುಂಬಿತೆಂತು!
ಬಗೆ ಬಗೆಯ ಬಣ್ಣಗಳ ಬರೆದ ಚಿತ್ರದ ಹಾಗೆ
ನೆಲದಮ್ಮ ನವವಧುವೆ ಆದಳಿಂತು!

ಕೊರಡ ಕೊನರಿಸಿ ತುದಿಗೆ ಮುಗುಳ ನಗೆ ಮುತ್ತಿಟ್ಟು
ಬರಡು ಜೀವಕೆ ಹೊಸತು ಚೈತನ್ಯವು
ಕುಕಿಲ ಕೋಗಿಲೆ ಕಂಠ ಮುಕ್ತ ತಾರಕಕೇರಿ
ಚಿಲಿಪಿಲಿಯ ಕಲರವಕೆ ಮತ್ತೇರಿದೆ.

ಮೈಕೊಡವಿ ಎದ್ದ ಜಗ ಖಗ ಪಕ್ಷಿ ಪ್ರಾಣಿಗಳು
ಲಗುಬಗೆಯ ದಗದಕ್ಕೆ ಹೊರಟಂತಿದೆ
ಹೊಸತು ಜೀವೋಲ್ಲಾಸ ಚಿಗಿತ ಭಾವವಿಲಾಸ
ನೆಲ ಮುಗಿಲ ವಾಲಗವೆ ನಡೆದಂತಿದೆ.

ಜೀವನದಲ್ಲಿ ನೀನು ಯಶಸ್ವಿಯಾಗಬೇಕೆಂದು ಇಷ್ಟಪಡುವುದಾದರೆ ಪ್ರಯತ್ನವನ್ನು ಮಿತ್ರನನ್ನಾಗಿ ಮಾಡಿಕೊ–ಅನಾಮಿಕ.



ಯುಗದ ಹಿಂದಿನ ಕೊಳೆಯ ತಿಕ್ಕಿ ಮೈ ತೊಳೆದಂತೆ
ನಗುವ ನಲಿವಿನ ಮುಖವೆ ಎಲ್ಲೆಲ್ಲಿಯೂ
ಬೆಲ್ಲ ಬೇವಿಗೆ ಸೇರಿ ಕಹಿ ಕಳೆದು ಸಿಹಿ ಹೆಚ್ಚಿ
ಎಲ್ಲರೆದೆಗಳ ತುಂಬ ಸವಿಚೈತ್ರವು.





**ಬಸವರಾಜ ಸಾದರ** ಜನನ ೧೯೫೫, ಊರು ಧಾರವಾಡ ಜಿಲ್ಲೆಯ ಕುಂದಗೋಳ. ತಂದೆ ಚೆನ್ನಪ್ಪ, ತಾಯಿ ಚನ್ನಬಸವ್ವ. ಸ್ನಾತಕೋತ್ತರ ಪದವೀಧರರು. 'ಬಸವರಾಜ ಕಟ್ಟೀಮನಿಯ ಕಾದಂಬರಿಗಳು' ಇದು ಇವರ ಸಂಶೋಧನೆಯ ಪ್ರಬಂಧ. ಬೆಂಗಳೂರು ಆಕಾಶವಾಣಿ ಕೇಂದ್ರದ ವಿವಿಧ ಭಾರತಿಯ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

**ಕೃತಿಗಳು:** ಸಿಸಿಫಸರ ಸುತ್ತು(ಕವನ ಸಂಕಲನ), ತಪ್ದಂಡ(ಕಥಾಸಂಕಲನ), ಅನುಮತಿ(ವಿಮರ್ಶಾಲೇಖನ), ಮೊದಲಾದ ೧೨ ಪುಸ್ತಕಗಳು. ಇವರ 'ಸಿಸಿಫಸರಸುತ್ತು' ಕವನಸಂಕಲನದಿಂದ ಪ್ರಸ್ತುತ ಪದ್ಯವನ್ನು ಆಯ್ದುಕೊಳ್ಳಲಾಗಿದೆ.

**ಆದಿ** – ಮೊದಲು. **ನೆಲದವ್ವ** – (ನೆಲದ ಅವ್ವ) ಭೂಮಿತಾಯಿ. **ವಧು** – ಮದುಮಗಳು. **ಕೊರಡು** – ಒಣಗಿದ ಮರದ ತುಂಡು. **ಕೊನರು** – ಚಿಗುರು. **ಚೈತನ್ಯ** – ಚಟುವಟಿಕೆ. **ಮುಕ್ತ** – ಬಿಡುಗಡೆ ಹೊಂದಿದ. **ತಾರಕ** – ಎತ್ತರದ ಸ್ವರ (ಪಾರು ಮಾಡುವವನು). **ಮತ್ತು** – ಮಾದಕತೆ. **ಮುಗುಳು** – ಮೊಗ್ಗು. **ಕಲರವ** – ಮೋಹಕ ಧ್ವನಿ. **ದಗದ** – ಕೆಲಸ. **ಖಗ** – (**ಖ** – ಆಕಾಶ, **ಗ** – ಗಮನವುಳ್ಳದ್ದು) ಸೂರ್ಯ, ಹಕ್ಕಿ. **ಚಿಗಿತ** – ಚಿಗುರಿದ. **ವಾಲಗ** – ಓಲಗ, ವಾದ್ಯ.

**ಪರಿಶುದ್ಧ ಜೀವನವನ್ನು ನಡೆಸಬಲ್ಲವನೇ ಪರಮಾತ್ಮನ ಆಜ್ಞೆಯಂತೆ ನಡೆದವನಾಗುತ್ತಾನೆ – ಥಾಮಸ್ ಅಂತೋನಿ.**

## ಗಮನಿಸಿ

**ಬೆಲ್ಲ ಬೇವಿಗೆ ಸೇರಿ –** ಸಂಕ್ರಾಂತಿಯಂದು ಎಳ್ಳು ಬೆಲ್ಲ ಹೇಗೋ ಹಾಗೆಯೇ ಯುಗಾದಿಯಂದು ಬೇವು ಬೆಲ್ಲವನ್ನು ತಿಂದು, ಬರಲಿರುವ ಸುಖ ದುಃಖಗಳನ್ನು ಸಮಾನವಾಗಿ ಸ್ವೀಕರಿಸುವ ಸಂಕಲ್ಪ ಮಾಡುವ ಆಚರಣೆ.

**ಸಿಸಿಫಸ್ :** ನಾಲ್ಕುಬಾರಿ ಪ್ರಾಣಾಪಾಯದಿಂದ ಪಾರಾಗಿದ್ದ ಗ್ರೀಕ್ ದೊರೆ ಸಿಸಿಫಸ್‌ರನು ಮೃತ್ಯುವನ್ನು ಗೆಲ್ಲಲೇಬೇಕೆಂದು ದೈವವನ್ನು ಮೊರೆಹೋದ, ಸಾವುಬಾರದಿರಬೇಕಾದರೆ ಬೆಟ್ಟದ ಚೂಪಾದ ಭಾಗದಮೇಲೆ ದೊಡ್ಡಬಂಡೆಯನ್ನು ನಿಲ್ಲಿಸು ಎಂದು ದೈವ ಹೇಳುತ್ತದೆ. ಆ ಪ್ರಯತ್ನದಲ್ಲಿ ರಾಜನು ನಿರಂತರವಾಗಿ ಸೋತರೂ ಆ ಕಾರ್ಯದಲ್ಲಿ ಈಗಲೂ ತೊಡಗಿದ್ದಾನೆ ಎಂಬುದು ಗ್ರೀಕರ ನಂಬುಗೆ.

## ಅಭ್ಯಾಸ

**I. ಈ ಅಪೂರ್ಣ ಹೇಳಿಕೆಗಳನ್ನು ಪೂರ್ಣ ಮಾಡಲು ನೀಡಿದ ನಾಲ್ಕು ಆಯ್ಕೆಗಳಲ್ಲಿ ಸೂಕ್ತವಾದುದನ್ನು ಆರಿಸಿ ಬರೆಯಿರಿ.**

೧. ಆದಿ ಇದರ ವಿರುದ್ಧಾರ್ಥಕ ಪದ ________

೧) ಕೊನೆ ೨) ಮೊದಲು ೩) ಅನಾದಿ ೪) ನಿರಾದಿ

೨. 'ಬಣ್ಣ' ಇದರ ಸಂಸ್ಕೃತ ಪದ ________

೧) ರಂಗು ೨) ವರಣ ೩) ವರ್ಣ ೪) ಕರ್ಣ

೩. ತಾರಕಕೇರಿ ಇದು ಯಾವ ಸಂಧಿಗೆ ಉದಾಹರಣೆಯಾಗಿದೆ?

೧) ಸವರ್ಣದೀರ್ಘ ೨) ಗುಣ ೩) ಲೋಪ ೪) ಆದೇಶ

೪. ಅನುಕರಣಾವ್ಯಯ ಈ ಪದವು ಉದಾಹರಣೆಯಾಗಿದೆ________

೧) ಬೇವುಬೆಲ್ಲ ೨) ಲಗುಬಗೆ ೩) ಬಗೆಬಗೆ ೪) ಚಿಲಿಪಿಲಿ

೫. ಕ್ರಿಯಾಸಮಾಸಕ್ಕೆ ಈ ಪದವು ಉದಾಹರಣೆಯಾಗಿದೆ______

೧) ಮೈಕೊಡವಿ ೨) ಸವಿಚೈತ್ರ ೩) ಹೊಸಕಳೆ ೪) ಮುಗುಳುನಗೆ



**II. ಹೊಂದಿಸಿ ಬರೆಯಿರಿ.**

| ಅ | ಬ |
|---|---|
| ೧. ಕಹಿ | ದುಗುಡ |
| ೨. ಮುಖ | ಸುಖ |
| ೩. ಪಕ್ಷಿ | ಸಿಹಿ |
| ೪. ಸೊಗ | ಮೊಗ |
| | ಹಕ್ಕಿ |

**ದಾನಧರ್ಮ ಮಾಡಿ ಬಡವರಾದವರು ಯಾರೂ ಇಲ್ಲ – ಇಟಲಿ ನಾಣ್ಣುಡಿ.**

**III. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. ಸುಖದ ಸುಗ್ಗಿಯು ಯಾವಾಗ ಬಂದಿತು?

೨. ಸುಗ್ಗಿ ಬಂದಾಗ ನೆಲದಮ್ಮ ಏನಾದಳು?

೩. ಯಾವ ರೀತಿಯಲ್ಲಿ ಬರಡು ಜೀವಕೆ ಚೈತನ್ಯ ಮೂಡಿತು?

೪. ಯಾವುದರಿಂದ ಚಿಲಿಪಿಲಿಯ ಕಲರವಕೆ ಮತ್ತೇರಿತು?

೫. ಪ್ರಾಣಿ ಪಕ್ಷಿಗಳು ದಗದಕ್ಕೆ ಹೊರಟಂತೆ ಮೈಕೊಡವಿ ಎದ್ದವು ಎಂದರೇನು?

೬. ಯುಗಾದಿಯ ಸಾರ್ವತ್ರಿಕವಾದ ಸಂಪ್ರದಾಯ ಯಾವುದು?

**IV. ಈ ಪ್ರಶ್ನೆಗಳಿಗೆ ೩–೪ ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ನೆಲದಮ್ಮ ನವವಧುವು ಆದುದು ಹೇಗೆ?

೨. ಚೈತ್ರದಲ್ಲಾಗುವ ಪ್ರಕೃತಿಯ ಬದಲಾವಣೆಗಳಾವುವು?

೩. ಎಲ್ಲರೆದೆಗಳ ತುಂಬ ಸವಿಚೈತ್ರ ಅಂದರೇನು?

**V. ಸುಮಾರು ಎಂಟು ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಚೈತ್ರವು 'ಸವಿ' ಆದದ್ದು ಹೇಗೆ?

೨. ಚೈತ್ರವೇ ಯುಗದ ಆದಿ ಎಂಬುದನ್ನು ಕವಿಯು ಹೇಗೆ ಸಮರ್ಥಿಸಿದ್ದಾರೆ?

೩. ನೆಲದಮ್ಮ ನವವಧುವೆ ಆದಳು – ಈ ಮಾತಿನ ಅರ್ಥ ವಿಶೇಷವನ್ನು ಬರೆಯಿರಿ.



## ಭಾಷಾಭ್ಯಾಸ

೧. ಈ ಪದಗಳನ್ನು ಬಿಡಿಸಿ ಬರೆಯಿರಿ.

ಜಗಕೆಲ್ಲ, ತುಂಬಿತೆಂತು, ನೆಲದಮ್ಮ, ಜೀವೋಲ್ಲಾಸ, ತಾರಕಕೇರಿ, ಮುತ್ತಿಟ್ಟು

೨. ಈ ಸಮಸ್ತಪದಗಳನ್ನು ಬಿಡಿಸಿ ಬರೆಯಿರಿ.

ಕೊರಡಕೊನರಿಸಿ, ಭಾವವಿಲಾಸ, ಸವಿಚೈತ್ರ, ಮುಗುಳುನಗೆ, ನೆಲಮುಗಿಲು

೩. ಈ ಪದ್ಯದಲ್ಲಿಯ ಪ್ರಾಸಪದಗಳನ್ನು ಕ್ರಮಗೊಳಿಸಿ ಬರೆಯಿರಿ

## ಚಟುವಟಿಕೆ

೧. ಈ ಪದ್ಯಕ್ಕೆ ರಾಗ ಸಂಯೋಜಿಸಿ ಗೆಳೆಯರೊಡಗೂಡಿ ಹಾಡಿರಿ.

**ತಾಯಿಯನ್ನು ಮೆಚ್ಚಿಸಿದವನು ಸಮಸ್ತ ಭೂಮಂಡಲವನ್ನು ಪೂಜಿಸಿದವನಾಗುವನು – ಅಳಸಿಂಗಾಚಾರ್.**

**೨. ಈ ಎರಡು ಪದ್ಯಗಳನ್ನು ಕಂಠಪಾಠ ಮಾಡಿರಿ.**

ಕೊರಡ ಕೊನಸಿರಿ ________________ ಕಲರವಕೆ ಮತ್ತೇರಿದೆ

ಯುಗದ ಹಿಂದಿನ ________________ ತುಂಬ ಸುವಿಚೈತ್ರವು

೩. ಮಗುವಿಗೆ ಸಂಬಂಧಿಸಿದಂತೆ ಇಲ್ಲಿ ಪದ್ಯವೊಂದರ ಪದಗಳನ್ನು ಅಸ್ತವ್ಯಸ್ತಗೊಳಿಸಿ ಕೊಡಲಾಗಿದೆ. ಅವುಗಳನ್ನು ಅರ್ಥಯುಕ್ತವೆನಿಸುವಂತೆ (ಮಾದರಿಯ ಎರಡು ಸಾಲುಗಳಂತೆ) ಒಟ್ಟು ಹತ್ತು ಸಾಲುಗಳನ್ನು – ಗೆಳೆಯರೊಡಗೂಡಿ ಪದ್ಯವೊಂದನ್ನು ಪುನಾರಚಿಸಲು ಪ್ರಯತ್ನಿಸಿ.

**ನೋಡೆ, ಹಲವು, ಅಳುವೆಯಾ, ಹಿಡಿದು, ಕೆಟ್ಟು, ಬೇಡವು, ಹಲ್ಲ, ಹೊರಗು, ಕೂಡೆ, ಬಿಳಿಯ, ಕರೆವೆ, ಯಾಡಿ, ಎತ್ತಿ, ದಿನವು, ಹೊಸತು, ಮಗುವು, ಚೆಲ್ಲಿ, ಬಿಡುವೆ.**

ಪುಟ್ಟ ಪುಟ್ಟ ಮಗುವೆ ನೀನು

ಮೋಡಿಮಾಡಿ ನಗುವೆಯೇನು

ಚಂಡಿ __________ ಅಳುವೆ ಬಿದ್ದು

__________ ಕೊಳಲು __________ ಬಿಡುವೆಯಾ

ಒಳಗು __________ ನಡೆವೆ __________

ಹೆಜ್ಜೆ ಗುರುತ __________ __________

ನೀರ __________ ಮುದದಿ

ಓಡಿ __________ ಬಿದ್ದು __________

ನೋಡ__________ ಗೋಡೆ

ಅಂದ __________ ಗೀಚು ಗೆರೆಗೆ

__________ ಚಿತ್ರ ಬಣ್ಣ __________

ಇತ್ತೆ ಪ್ರಶ್ನೆ __________



**ಸತ್ಯದ ಭಯವೇ ನಮ್ಮನ್ನು ನಿಯಂತ್ರಿಸುವ ಶಕ್ತಿ – ಹೆನ್ರಿ ಫೆಡ್ರಿಕ್.**

# ಪದ್ಯ – ೪

# ಸದ್ದು ಮಾಡದಿರು!

–ಸಿ.ಪಿ.ಕೃಷ್ಣಕುಮಾರ್

**ಪಾಠಪ್ರವೇಶ:** ಆಡಂಬರ, ಪ್ರದರ್ಶನ ಇವುಗಳಿಗೆ ಜನಮನಸೋಲುವುದು ಸಾಮಾನ್ಯ. ಸಂಪತ್ತು, ಹೆಸರು, ಕೀರ್ತಿ ಇವುಗಳನ್ನು ಪಡೆಯುವುದೇ ಜೀವನದ ಸಾರ್ಥಕ್ಯವೆಂದು ಬಹಳಷ್ಟು ಮಂದಿ ತಿಳಿದಿದ್ದಾರೆ. ಆದರೆ ನಮ್ಮೆಲ್ಲರ ಬಾಳಿಗೆ ಆಧಾರವಾಗಿರುವ ಪ್ರಕೃತಿಯು ಮಾತ್ರ ಯಾವುದೇ ಸದ್ದುಗದ್ದಲವಿಲ್ಲದೆ ತನ್ನೆಲ್ಲಾ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಹೋಗುತ್ತಲೇ ಇರುತ್ತದೆ. ಮಾತ್ರವಲ್ಲ, ಎಷ್ಟೋ ಅದ್ಭುತ ಘಟನೆಗಳನ್ನೂ ಪ್ರದರ್ಶಿಸುತ್ತದೆ. ಆಕಾಶದಲ್ಲಿ ನಕ್ಷತ್ರಗಳು ಮಿನುಗುತ್ತಿರುವುದು, ಕಾಮನ ಬಿಲ್ಲು ಗೋಚರವಾಗುವುದು, ಸದ್ದುಮಾಡದೆ ಪುಷ್ಪವು ಅರಳಿ ಪರಿಮಳಸೂಸುವುದು, ಕಾಯಿಗಳು ಮಾಗಿ ರಸಭರಿತ ಹಣ್ಣು ಆಗುವುದು ಇಂತಹ ನೂರಾರು ಅದ್ಭುತ ರಮ್ಯಗಳು ಈ ಪ್ರಕೃತಿಯ ಕೊಡುಗೆ. ಆದರೆ ಹೀಗೆ ನಡೆಯುವ ಹೊತ್ತಿನಲ್ಲಿ ತಾನು ಹೀಗೆ, ತನ್ನಿಂದಲೇ ಇದಾಗುತ್ತದೆ ಎಂಬ ಯಾವುದೇ ಬಯಲಾಡಂಬರವನ್ನು ಅವು ತೋರವು. ಇದು ನಮಗೆ ಆದರ್ಶವಾಗಬೇಕು. ಮೌನವಾಗಿ ಶಾಂತಿ, ಸಹನೆ ಪ್ರೀತಿಗಳಿಂದ ಕರ್ತವ್ಯ, ದುಡಿಮೆಯನ್ನು ಮಾಡಿ ಮುಗಿಸಬೇಕು – ಎಂಬ ಸಂದೇಶ ಇಲ್ಲಿದೆ.



ಸದ್ದು ಮಾಡದೆ ಬಾಳು ಬಾಳೆಲವೊ ಜೀವ ;<br>
ಗದ್ದಲದ ಬಿರುದಿರದೆ ಸೇರು ರೇವ !<br>
ತಟ್ಟೆಯೊಳು ಕರ್ಪೂರ ಮೌನದಲಿ ಕರಗುವೊಲು,<br>
ದೀಪದೆದುರಿಗೆ ತಿಮಿರ ಸರಿಯುವಂತೆ<br>
ಶಾಂತಿಯಲಿ ಬದುಕಿನೀ ಕರ್ತವ್ಯವನು ಮುಗಿಸು ;<br>
ಕೂಗಾಡಿ, ಹಾರಾಡಿ ಫಲವದೇನು ?<br>
ಹಸಿಸೌದೆ ಬುಸುಗುಟ್ಟಿ ದನಿಯನೆತ್ತುವುದಲ್ತೆ,<br>
ಕಿಡಿ ಸೋಕೆ ಮದ್ದು ಸಿಡಿದಬ್ಬರಿಪುದು –<br>
ಅಂತಿರದೆ ರವಿಕರಕೆ ಕರಗುವಿಬ್ಬನಿವೊಲಿರು ;<br>
ಸಿಡುಕು ಮಿಡುಕನು ತೊರೆದು ಮೌನಿಯಾಗು !

ಒಳ್ಳೆಯ ಕೆಲಸವನ್ನು ಮಾಡಲಿಚ್ಛಿಸುವವನು ಅದರಿಂದ ತನಗೇನು ಲಾಭ ಎಂದು ಯೋಚಿಸಬಾರದು – ಎಪಿಕ್ಟಾಟಸ್.



**ಸಿ.ಪಿ.ಕೆ** ಯವರ ಪೂರ್ಣ ಹೆಸರು ಡಾ। ಚಿಕ್ಕನಾಯಕನ ಹಳ್ಳಿ ಪುಟ್ಟೇಗೌಡ ಕೃಷ್ಣಕುಮಾರ್. ಇವರು ಕೃಷ್ಣರಾಜನಗರ ತಾಲೂಕಿನ ಚಿಕ್ಕನಾಯಕನ ಹಳ್ಳಿ.ಯಲ್ಲಿ ೧೯೩೯ರಲ್ಲಿ ಜನಿಸಿದರು. ಸ್ನಾತಕೋತ್ತರ ಪದವಿಯೊಂದಿಗೆ ೧೯೭೪ರಲ್ಲಿ ನಾಗವರ್ಮನ 'ಕರ್ನಾಟಕ ಕಾದಂಬರಿ– ತೌಲನಿಕ ಮತ್ತು ವಿಮರ್ಶಾತ್ಮಕ ಅಧ್ಯಯನ' ಎಂಬ ಮಹಾಪ್ರಬಂಧಕ್ಕಾಗಿ ಪಿಎಚ್.ಡಿ. ಪದವಿ ಪಡೆದರು. ೨೦೧೧ರಲ್ಲಿ ನಡೆದ ಎಪ್ಪತ್ತೆಂಟನೆಯ ಕನ್ನಡ ಸಾಹಿತ್ಯಸಮ್ಮೇಳನದ ಅಧ್ಯಕ್ಷರಾಗಿದ್ದರು. ಅನಂತಪೃಥ್ವೀ, ಪ್ರಕೃತಿ, ಬೊಗಸೆ, ಕನ್ನಡ ಚತುರ್ಮುಖ, ಕಾವ್ಯಾರಾಧನಾ, ಜನಪದ ಪ್ರತಿಭೆ, ಪರಿಭಾವನೆ, ಜನ್ನ, ನಾಗಚಂದ್ರ, ಸಾಹಿತ್ಯ ಪ್ರವೇಶ, ಸಾಹಿತ್ಯ ತತ್ವಗಳು, ಪಾಶ್ಚಾತ್ಯ ಕಾವ್ಯಚಿಂತನ, ಕನ್ನಡ ನಾಗಾನಂದ, ಕನ್ನಡ ರತ್ನಾವಳಿ – ಇವು ಸಿ.ಪಿ.ಕೆ.ಯವರ ಕೃತಿಗಳಲ್ಲಿ ಕೆಲವು.

ಪ್ರಸ್ತುತ ಕವನವನ್ನು ಅವರ 'ಬೊಗಸೆ' ಕವನ ಸಂಕಲನದಿಂದ ಆಯ್ದುಕೊಳ್ಳಲಾಗಿದೆ.

## ಅರ್ಥ ತಿಳಿಯಿರಿ

**ರೇವು** – ಬಂದರು, ಹಡಗುನಿಲ್ಲುವ ಸ್ಥಳ. **ತಿಮಿರ** – ಕತ್ತಲೆ, ಅಜ್ಞಾನ. **ಒಲು** (ಅವ್ಯಯ) – ಅಂತೆ. **ಧ್ವನಿ** (ಸಂ) – ದನಿ (ತದ್ಭವ). **ಅಲ್ತೆ** (ಅವ್ಯಯ) – ಅಲ್ಲವೆ. **ಸೋಂಕು** – ಸೋಕು, ತಾಗು. **ರವಿಕರ** – ಸೂರ್ಯಕಿರಣ. **ಮಿಡುಕು** – ನಡುಗು. **ತೊರೆ** – (ಕ್ರಿಯಾಪದ) ಬಿಡು, ತ್ಯಜಿಸು (ನಾಮಪದ) ಹೊಳೆ, ನದಿ. **ಬಿರುದು** – ಪ್ರಶಸ್ತಿ. **ಮದ್ದು** – ಸಿಡಿಯುವ ಮದ್ದು. **ಇಬ್ಬನಿ** – (ಇನಿದು ಪನಿ–ಕ.ಧಾ ಸಮಾಸ) ಮಂಜಿನಹನಿ.



## ಅಭ್ಯಾಸ

**I. ಒಂದೆರಡು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ತಿಮಿರಕ್ಕೆ ವೈರಿ ಯಾವುದು?

೨. ಕರ್ತವ್ಯವನ್ನು ಹೇಗೆ ಮುಗಿಸಬೇಕೆಂದು ಕವಿಯು ತಿಳಿಯಹೇಳಿದ್ದಾರೆ?

೩. ಬರೇ ಸದ್ದು ಮಾಡುವುದು ಯಾವುದು?

೪. ಇಬ್ಬನಿ ಮಾಯವಾಗುವುದು ಹೇಗೆ?

**II. ಈ ಪ್ರಶ್ನೆಗಳಿಗೆ ೩–೪ ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. 'ದೀಪದೆದುರಿಗೆ ತಿಮಿರ ಸರಿಯುವಂತೆ' ಎಂದರೆ ಏನು?

೨. ಕವಿ ಸಿ.ಪಿ.ಕೆ.ಯವರು ಪ್ರತಿಯೊಬ್ಬನೂ ತನ್ನದಾದ ಕರ್ತವ್ಯವನ್ನು ಹೇಗೆ ಮಾಡಬೇಕೆನ್ನುತ್ತಾರೆ?

**ಸೇವಾಕಾರ್ಯಗಳಲ್ಲಿ ಪ್ರೀತಿ ಕರುಣೆ ಇರಬೇಕೇ ಹೊರತು ಪ್ರತಿಷ್ಠೆ ಕೀರ್ತಿಗಳ ಕಾಮನೆಗಳಲ್ಲ – ರಾಮಕೃಷ್ಣ ಪರಮಹಂಸ.**

೩. ‘ಆಡಂಬರವಿರದ ಕರ್ತವ್ಯಪರತೆ’ ಇದು ಕವಿಯ ಧೋರಣೆ. ಇದರ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಬರೆಯಿರಿ.

**III. ಸಂದರ್ಭದೊಂದಿಗೆ ವಿವರಿಸಿ.**

೧. ಕೂಗಾಡಿ ಹೋರಾಡಿ ಫಲವೇನು?

೨. ಸಿಡುಕು ಮಿಡುಕನು ತೊರೆದು ಮೌನಿಯಾಗು.

**IV. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ‘ಸದ್ದು ಮಾಡದಿರು’ ಕವನದ ಸಾರವನ್ನು ತಿಳಿಸಿರಿ.

೨. ಕರ್ತವ್ಯದ ಬಗ್ಗೆ ಸಿ.ಪಿ,ಕೆ.ಯವರ ಧೋರಣೆ ಏನು?

೩. ಈ ಪದ್ಯವನ್ನು ಅರ್ಥಮಾಡಿಕೊಂಡ ಮೇಲೆ ನಿಮ್ಮ ಅನಿಸಿಕೆ ಏನೆಂಬುದನ್ನು ತಿಳಿಸಿರಿ.

## ಭಾಷಾಭ್ಯಾಸ



**I. ಈ ಪದಗಳನ್ನು ಬಿಂಗಡಿಸಿ ಬರೆಯಿರಿ.**

ಬಿರುದಿರದೆ, ದೀಪದೆದುರಿಗೆ, ದನಿಯನೆತ್ತುವುದಲ್ತೆ, ಸಿಡಿದಬ್ಬರಿಸುವುದು, ಅಂತಿರದೆ, ಕರಗುವಿಬ್ಬನಿವೊಲಿರು, ಮೌನಿಯಾಗು.

**II. ಬಿಟ್ಟ ಪದ ತುಂಬಿರಿ.**

೧. ತಟ್ಟೆಯೊಳು ______________ ಮೌನದಲಿ ಕರಗುವುದು.

೨. ಕಿಡಿ ಸೋಕೆ ______________ ಸಿಡಿದಬ್ಬರಿಸುವುದು.

೩. ಸಿಡುಕುಮಿಡುಕನು ______________ ಮೌನಿಯಾಗು.

**III. ಸಿಡುಕು – ಮಿಡುಕು : ಇಂತಹ ಹತ್ತು ಜೋಡಿಪದಗಳನ್ನು ಬರೆಯಿರಿ.**

## ಚಟುವಟಿಕೆ

೧. ಈ ಪದ್ಯಭಾಗದಲ್ಲಿ ನಿನಗೆ ಖುಷಿಕೊಟ್ಟ ಸಾಲುಗಳು ಯಾವುವು? ಏಕೆ? ಅದರ ಬಗ್ಗೆ ಗೆಳೆಯರೊಂದಿಗೆ ಚರ್ಚಿಸಿ

೨. ಈ ಪದ್ಯವನ್ನು ರಾಗವಾಗಿ ಹಾಡಲು ಪ್ರಯತ್ನಿಸಿ.

**ಸಮುದ್ರದ ಅಲೆಗಳು ಮತ್ತು ಸಮಯ ಯಾರಿಗಾಗಿಯೂ ಕಾಯುವುದಿಲ್ಲ – ಇಂಗ್ಲೆಂಡಿನ ನಾಣ್ಣುಡಿ.**

# ಅಲಂಕಾರ

ತಮಗೆ ಸೌಂದರ್ಯವಿದ್ದರೂ ಅನೇಕರು ತಾವು ಇನ್ನಷ್ಟು ಸೊಗಸುಗಾರರಾಗಲು ಅಲಂಕರಿಸಿಕೊಳ್ಳುತ್ತಾರೆ. ಬಾಹ್ಯಾಲಂಕಾರದೊಂದಿಗೆ ಅಂತರಂಗದ ಸದ್ಗುಣ, ಮಾನವೀಯತೆ, ಸಜ್ಜನಿಕೆ, ಮೊದಲಾದುವು ವ್ಯಕ್ತಿತ್ವದ ಉಜ್ವಲತೆಗೆ ಕಾರಣವಾಗುತ್ತವೆ. ಹಾಗೆಯೇ ಸಾಮಾನ್ಯ ಪದಗಳಿಂದ ಕವಿತೆಯ ವಿಷಯ ವಿಸ್ತಾರಗೊಳ್ಳುವುದಾದರೂ ಅದನ್ನು ಇನ್ನಷ್ಟು ಆಕರ್ಷಕಗೊಳಿಸುವುದಕ್ಕೆ ಕಾವ್ಯಾಲಂಕಾರದ ಅಗತ್ಯವಿದೆ. ಇದರಲ್ಲಿ ಗೆಜ್ಜೆಯ ಸದ್ದಂತೆ, ಕಿವಿಗೆ ರಂಜಕವಾಗುವ ಶಬ್ದಾಲಂಕಾರ ಒಂದು ರೀತಿಯದು; ಇನ್ನೊಂದು ಅಂತರಂಗದ ಅಲಂಕಾರದಂತಿರುವ ಅರ್ಥಾಲಂಕಾರಗಳು.

**ಶಬ್ದಾಲಂಕಾರ :** ಪದ್ಯದ ಸಾಲುಗಳಲ್ಲಿ ಅಕ್ಷರಗಳು ಹಾಗೂ ಪದಗಳು ನಿಯಮಿತ ಸ್ಥಾನದಲ್ಲಿ ಪುನರಾವರ್ತನೆಗೊಂಡರೆ ಅದು ಶಬ್ದಾಲಂಕಾರ. ಗಮನಿಸಿ : ಇದೇ ಪದ್ಯದಲ್ಲಿಯ 'ಅಂತಿರದೆ ರವಿಕರಕೆ ಕರಗುವಿಬ್ಬನಿವೊಲಿರು' ಎಂಬ ಸಾಲಲ್ಲಿ 'ರ'ಕಾರದ ಪುನರಾವರ್ತನೆ ಇದೆ. ಹಾಗೆಯೇ 'ಎಳ ಗಿಳಿಗಳ ಬಳಗಂ ಗಳಗಳನಿಳಿತಂದೆಳ ಕಳಮೆಯ'ಎಂಬ ಪದ್ಯದ ಸಾಲಲ್ಲಿ 'ಗ' ಮತ್ತು 'ಳ' ಮತ್ತೆ ಮತ್ತೆ ಬಂದಿದೆ. . ಹಾಗೆಯೇ 'ಎಲ್ಲಿ ಮುನಿಪೋತ್ತಮರ ಪಾವನದವನದೆಡೆಗಳೆಲ್ಲಿ ಸುಹವಿಗಳ ಕಂಪೊಗೆದ ಪೊಗೆದಳೆದ' ಎಂಬ ಷಟ್ಪದಿಯೊಂದರ ಸಾಲಲ್ಲಿ **ಪಾ'ವನ'ದ 'ವನ'ದೆಡೆ** ಎಂಬಲ್ಲಿ 'ವನ' ಮತ್ತು **ಕಂ'ಪೊಗೆದ' 'ಪೊಗೆದ'ಳೆದ** ಎಂಬಲ್ಲಿ 'ಪೊಗೆದ' ಎಂಬ ಶಬ್ದವು ಅರ್ಥವ್ಯತ್ಯಾಸದೊಂದಿಗೆ ಮರಳಿಬಂದದ್ದನ್ನು ಗಮನಿಸಿ. ಕಿವಿಗೆ ಹಿತಕರವಾದ ಶಬ್ದಾಲಂಕಾರಕ್ಕೆ ಇವು ಉದಾಹರಣೆಯಾಗುತ್ತವೆ.

**ಅರ್ಥಾಲಂಕಾರ** : ಕವಿಯು ಶಬ್ದದಲ್ಲಿ ಚಮತ್ಕಾರ ತೋರದಿದ್ದರೂ ದೃಷ್ಟಾಂತ, ರೂಪಕ, ಹೋಲಿಕೆಗಳಿಂದ ವರ್ಣನೆಗೊಳ್ಳುತ್ತಿರುವ ಭಾಗವು ಬುದ್ಧಿ ಮತ್ತು ಮನಕ್ಕೆ ಆನಂದವನ್ನು ನೀಡುವಂತೆ ಕಟ್ಟುತ್ತಾನೆ. ಮೇಲಿನ ಪದ್ಯದ ಒಂದು ಕಡೆಯಲ್ಲಿ 'ತಟ್ಟೆಯೊಳು ಕರ್ಪೂರ ಮೌನದಲಿ ಕರಗುವೊಲು । ದೀಪದೆದುರಿಗೆ ತಿಮಿರ ಸರಿಯುವಂತೆ ॥ ಶಾಂತಿಯಲಿ ಬದುಕಿನೀ ಕರ್ತವ್ಯವನು ಮುಗಿಸು' ಎಂಬ ಮೂರು ಸಾಲುಗಳಿವೆ. ಮೊದಲೆಡು ಸಾಲುಗಳ ಕೊನೆಯಲ್ಲಿ ಒಲು, ಅಂತೆ ಎಂಬೆರಡು ಪದ ಇದೆ. ಕರ್ಪೂರವು ಮೌನದಲ್ಲಿ ಕರಗುವ ಹಾಗೆ, ದೀಪದೆದುರಿಗೆ ಕತ್ತಲೆಯು ಸರಿಯುವ ಹಾಗೆ ಸದ್ದಿಲ್ಲದೆ ನಿನ್ನ ಕರ್ತವ್ಯವನ್ನು ಮಾಡು ಎಂಬುದು ಇದರ ಅರ್ಥ. ಸದ್ದುಗದ್ದಲವಿಲ್ಲದೆ ನಮ್ಮ ಕರ್ತವ್ಯವನ್ನು ಮಾಡಬೇಕು ಎಂಬುದಕ್ಕೆ ಕರ್ಪೂರ ಮತ್ತು ದೀಪ ಹೋಲಿಕೆಯಾಗಿ ಬಂದಿದೆ. ಮೊದಲ ಎರಡು ಸಾಲುಗಳು ಹೋಲಿಕೆಯದು, ಅದು ಉಪಮಾನ. ಒಲು, ಅಂತೆ, ಎಂಬಂತಹ ಪದಗಳು ಹೋಲಿಕೆಗೆ ಇರುವ ಅವ್ಯಯ ಪದಗಳು. ಅದು ಉಪಮಾವಾಚಕ. ಮೂರನೆಯ ಸಾಲಿಗೆ ಮೊದಲೆರಡು ಸಾಲುಗಳು ಉಪಮಾನವಾಗಿವೆ. ಯಾವುದಕ್ಕೆ ಈ ಹೋಲಿಕೆಯನ್ನು ನೀಡುತ್ತೇವೆಯೋ ಅದು ಉಪಮೇಯ. ಉಪಮಾನ, ಉಪಮೇಯ ಎರಡಕ್ಕೂ ಸಮಾನವಾದ ಒಂದು ಕ್ರಿಯೆ ಅಥವಾ ಸೊಗಸು ಇತ್ಯಾದಿ ಇರಲೇಬೇಕು. ಅದೇ ಸಮಾನ ಧರ್ಮ. ಪ್ರಸ್ತುತ ಸಾಲುಗಳಲ್ಲಿ ಮೌನವಾಗಿ ಕರ್ಪೂರ ಕರಗುತ್ತದೆ. ಹಾಗೆಯೇ ಮೌನದಿಂದ ಕರ್ತವ್ಯವನ್ನು ಮಾಡಬೇಕು. ಇಲ್ಲಿ 'ಮೌನ' ಎರಡಕ್ಕೂ ಸಮಾನವಾದದು. ಹೀಗೆ ನಾಲ್ಕೂ ಭಾಗಗಳಿಂದ ಕೂಡಿರುವ ಉಪಮಾಲಂಕಾರ ಇಲ್ಲಿದೆ (ಪೂರ್ಣೋಪಮೆ) ಇದು ಅರ್ಥಾಲಂಕಾರಗಳಲ್ಲಿ ಬಹು ಮುಖ್ಯವಾದುದು.



**ನಿಜವಾದ ಶಿಕ್ಷಣವೆಂದರೆ ಮಾನವೀಯತೆಯ ವಿಕಾಸ – ವಿವೇಕಾನಂದ.**

## ಪದ್ಯ – ೫

# ಗುರಿ

*–ಎಂ. ಗೋಪಾಲಕೃಷ್ಣ ಅಡಿಗ*

**ಪಾಠಪ್ರವೇಶ :** ಬದುಕಿಗೊಂದು ಗುರಿ ಇಲ್ಲದಿದ್ದರೆ ಅದು ಎಲ್ಲಿಗೆ ಹೋಗಬೇಕೆಂಬ ನಿಶ್ಚಿತತೆ ಇಲ್ಲದ, ಅಪಾರವಾದ ಕಡಲಲ್ಲಿ ಚುಕ್ಕಾಣಿ ಇಲ್ಲದೆ ನೌಕೆಯನ್ನು ನಡೆಸಿದಂತೆ. ಬಾಲ್ಯದ ದಿನಗಳಲ್ಲಿ ನಿರ್ದಿಷ್ಟ ಗುರಿಯನ್ನು ನಿಶ್ಚಯಿಸಲು ಆಗುವುದಿಲ್ಲವಾದರೂ ಪ್ರೌಢಶಾಲೆಯ ಓದು ಮುಗಿವ ಹೊತ್ತಿಗೆ ಅದು ಖಚಿತವಾದ ರೂಪವನ್ನು ತಾಳಿರುತ್ತದೆ; ಅಥವ ತಾಳಬೇಕು. ಸ್ವೀಕರಿಸಿದ ಆ ಗುರಿಯನ್ನು ನಿರ್ವಹಿಸಲು ಕಷ್ಟವೆನಿಸಿದರೂ, ವೈಯಕ್ತಿಕ ಮತ್ತು ಪರಿವಾರದ ಹಾಗೂ ದೇಶದ ಶ್ರೇಯಸ್ಸಿಗಾಗಿ, ಎದುರಾಗುವ ಅಡ್ಡಿ ಆತಂಕಗಳನ್ನು ನಿವಾರಿಸಿಕೊಂಡು ಮುಂದೆ ಸಾಗಬೇಕು. ಒಂದು ಬಾಣಕ್ಕೆ ಒಂದೇ ಗುರಿ; ದೇಹಕ್ಕೂ ಆತ್ಮ ಒಂದೆ. ಹಾಗೆಯೇ ಜೀವನಕ್ಕೂ ಸಾಧ್ಯತೆಯ ಒಂದೇ ಗುರಿ ಇರಬೇಕು. ಮಾನವನಲ್ಲಿ ದೈವತ್ವವನ್ನು, ಭೂಮಿಯಲ್ಲಿ ಸ್ವರ್ಗವನ್ನು ಕಾಣುತ್ತಾ ಪರರ ಹಿತಕ್ಕಾಗಿ ಕರ್ತವ್ಯಪರರಾಗಬೇಕು. ಸ್ವಾರ್ಥದ ಜೊತೆ ಜೊತೆಯಲ್ಲಿಯೇ ಪರಾರ್ಥದಲ್ಲೂ ಜೀವನ ಸಾರ್ಥಕ್ಯವನ್ನು ಕಾಣಬೇಕು. ಸಮಾಜದಿಂದ ನೂರಾರನ್ನು ಪಡೆದು ಬೆಳೆದ ನಾವು ಅದೇ ಸಮಾಜಕ್ಕೆ ಸ್ವಲ್ಪವಾದರೂ ಮರಳಿಸುವುದು ನಮ್ಮ ಜೀವನಶೈಲಿಯಿಂದ ಸಾಧ್ಯವಾಗಬೇಕು.

ಅಳಿಯಾಸೆಗಳ ಸುಳಿಗೆ ಸಿಲುಕಿದೆಲೆ ಮನವೇ
ನೆಲೆಯಿರದೆ ತೊಳಲುವುದು ಮನುಜ ಜೀವನವೇ?
ನನೆಬೇಕು, ಕೊನೆಬೇಕು ನರನ ಬಾಳುವೆಗೆ,
ದಿನದ ಗೈಮೆಯ ಹೂವು ಫಲಿಸಿ ಬರುವುದಕೆ.

ಕೆಸರೊಳಿದ್ದರು ಮೇಲೆ ಬಾಂದಳವ ನೋಡಿ.
ಮಿಸುಪ ರವಿಕಿರಣಗಳ ಸಿರಿಗೆ ಮೆರೆದಾಡಿ,
ಮಸಗುವಂಬುಜದಂತೆ ಧ್ಯೇಯದಾಳ್ವಿಸಕೆ
ಬಸಮಾಗು, ಬಂದ ಮನುಜತೆಯ ಸಾರ್ಥತೆಗೆ.

ಗಾಳಿ ಬಂದೆಡೆ ತಿರುಗುವಾ ಹೇಡಿತನವು,
ದಾಳಿ ಬಂದೊಡನೆ ಶರಣೆಂಬ ಹೆಣ್ತನವು
ಬೇಡ. ಹಿಡಿದೊಳ್ದಾರಿಯೊಳು ಕೊನೆಯವರೆಗೆ
ದೂಡು ಬಾಳ್ವೆಯನು ಪೌರುಷದ ಹೊನಲೊಳಗೆ.

ಸಚ್ಚಾರಿತ್ರ್ಯ ಬೆಳವಣಿಗೆಗಾಗಿಯೇ ಶಿಕ್ಷಣ – ಮಹಾತ್ಮ ಗಾಂಧಿ.

ಒಂದು ಬಾಣಕೆ ಗುರಿಯು ಹಲವಿರುವುದುಂಟೆ?
ಒಂದು ದೇಹದೊಳಾತ್ಮವೆರಡಿರುವುದುಂಟೆ?
ಒಂದು ಜೀವನಕೇಕೆ ಹಲವು ಸಾಧ್ಯಗಳು?
ಒಂದೆ ಹೆಗ್ಗುರಿಗೆ ಹೋರಾಡು ಹಗಲಿರುಳು.

ನರನೊಳಗೆ ನಾರಾಯಣನ ರೂಪು ಕಂಡು,
ತಿರೆಯೊಳಗೆ ಸುರಪುರದ ಮೈಸಿರಿಯನುಂಡು
ಪರಹಿತಕೆ ಬಳಲುತಿರಲದುವೆ ಜೀವನವು;
ಪೆರತೇನನೆಸಗಿದರು ನಮಗೆ ಲಾಂಛನವು.



**ಎಂ. ಗೋಪಾಲಕೃಷ್ಣ ಅಡಿಗ,** ೧೯೧೮– ೧೯೯೨, ಹುಟ್ಟೂರು: ಉಡುಪಿ ಜಿಲ್ಲೆಯ ಕುಂದಾಪುರ ತಾಲೂಕಿನ ಮೊಗೇರಿ. ಕನ್ನಡ ಸಾಹಿತ್ಯವು ನವೋದಯದಿಂದ ನವ್ಯದ ಹಾದಿಯನ್ನು ಹಿಡಿಯುತ್ತಿದ್ದ ಕಾಲದಲ್ಲಿ ಅಡಿಗರು ನವ್ಯ ಪ್ರಕಾರದ ಪ್ರಸಿದ್ಧ ಕವಿಗಳಾಗುತ್ತ ಬೆಳೆದವರು. ಕುವೆಂಪು, ಕಾರಂತ, ಬೇಂದ್ರೆಯಂತಹ ಹಿರಿಯ ಕವಿಗಳ ಸಾಲಲ್ಲಿ ಗುರುತಿಸಿಕೊಂಡವರು. ಭಾವತರಂಗ, ಚಂಡೆಮದ್ದಳೆ, ಭೂಮಿಗೀತ, ನಡೆದುಬಂದ ದಾರಿ– ಈ ಮೊದಲಾದವು ಅವರ ಕವನಸಂಕಲನಗಳು. ಅನಾಥೆ, ಆಕಾಶದೀಪ– ಇವು ಎರಡು ಕಾದಂಬರಿಗಳು, ಪ್ರಬಂಧಪ್ರಕಾರದ ಇವರ 'ಸಮಗ್ರ ಗದ್ಯ'ವು ಕನ್ನಡ ಗದ್ಯಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯಾಗಿದೆ.

ಕೇಂದ್ರ ಹಾಗೂ ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ, ಕೇರಳದ ಕುಮಾರನ್ ಆಶಾನ್ ಪ್ರಶಸ್ತಿ, ಮಧ್ಯಪ್ರದೇಶದ ಕಬೀರ್ ಸಮ್ಮಾನ್ ಪ್ರಶಸ್ತಿಗಳನ್ನು ಪಡೆದವರು. ಧರ್ಮಸ್ಥಳದಲ್ಲಿ ನಡೆದ ಐವತ್ತೊಂದನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದವರು.

ಪ್ರಸ್ತುತ ಕವನವನ್ನು ಅವರ 'ಸಮಗ್ರ ಕಾವ್ಯ' ಕವನ ಸಂಕಲನದಿಂದ ಆರಿಸಲಾಗಿದೆ.



## ಅರ್ಥ ತಿಳಿಯಿರಿ

**ಅಳಿಯಾಸೆ** – ಕೀಳಾಸೆ, ಈಡೇರದ ಆಸೆ. **ತೊಳಲು** – ಅಲೆದಾಡು. **ಗೈಮೆ** – ದುಡಿಮೆ. **ಬಾಂದಳ** – (ಬಾನ್[ಆಕಾಶ]+ತಳ= ಆದೇಶಸಂಧಿ). **ಮಿಸುಪ** – ಹೊಳೆಯುವ. **ಬಸ**(ತದ್ಭವ) ವಶ(ಸಂಸ್ಕೃತ). **ಮಸಗು** – ವಿಜೃಂಭಿಸು. **ಅಂಬುಜ** – (ಅಂಬು – ನೀರು, ಜ – ಜನಿಸಿದ್ದು) – ತಾವರೆ. **ಆಳ್ವೆಸ** – (ಆಳ್+ಬೆಸ=ಆದೇಶಸಂಧಿ) – ಬೆಸನ–ಕೆಲಸ – **ಬೆಸನ**(ತದ್ಭವ) ವ್ಯಸನ(ಸಂಸ್ಕೃತ) – ಆಳಿನ ಕೆಲಸ. **ಒಳ್ದಾರಿ** – ಒಳ್ಳೆಯ ದಾರಿ. **ತಿರೆ**(ತದ್ಭವ) ಸ್ಥಿರಾ(ಸಂಸ್ಕೃತ) – ಭೂಮಿ. **ಸುರಪುರ** – ದೇವಲೋಕ. **ಪೆರತು** –ಬೇರೆ. **ಲಾಂಛನ** – ಅಪಕೀರ್ತಿ **ಹೊನಲು** – ಪ್ರವಾಹ. **ನನೆ ಕೊನೆ**– ಅರಳಲಿರುವ ಮೊಗ್ಗು.

**ಕೈಲಾಗದವನು ಮಾಡುವ ಮೂರ್ಖ ಕಾರ್ಯವೆಂದರೆ ಇತರರನ್ನು ಟೀಕಿಸುವುದು – ಎಡಿಸನ್.**

## ಅಭ್ಯಾಸ

**I. ನೀಡಿದ ನಾಲ್ಕು ಆಯ್ಕೆಗಳಲ್ಲಿ ಸೂಕ್ತವಾದುದನ್ನು ಆರಿಸಿ ಬಿಟ್ಟ ಸ್ಥಳವನ್ನು ತುಂಬಿರಿ.**

೧. ಮನುಷ್ಯನ ದುಡಿಮೆಗೆ ಫಲ ದೊರೆಯಬೇಕಾದರೆ ಅದಕ್ಕೆ ಒಂದು ನಿರ್ದಿಷ್ಟ ____________ ಬೇಕು.
(ಗುರಿ, ಆಸೆ, ಬಯಕೆ, ಉತ್ಸಾಹ.)

೨. ಗಾಳಿ ಬಂದೆಡೆ ತಿರುಗುವಾ ____________
(ಸಿರಿತನ, ಬಡತನ, ಹೇಡಿತನ, ಹೆಣ್ತನ.)

೩. ಅಡಿಗರ ಕಾದಂಬರಿಗಳಲ್ಲಿ ಇದೂ ಒಂದು ____________
(ಭಾವತರಂಗ, ನಡೆದುಬಂದದಾರಿ, ಚಂಡೆಮದ್ದಳೆ, ಆಕಾಶದೀಪ.)

೪. ಕುಮಾರನ್ ಆಶಾನ್ ಪ್ರಶಸ್ತಿಯನ್ನು ____________ ರಾಜ್ಯ ನೀಡುತ್ತದೆ.
(ಕರ್ನಾಟಕ, ಕೇರಳ, ಆಂಧ್ರಪ್ರದೇಶ, ತಮಿಳುನಾಡು.)

೫. 'ಹೆಗ್ಗುರಿ' ಇದು ____________ ಸಮಾಸವಾಗಿದೆ.
(ತತ್ಪುರುಷ, ದ್ವಿಗು, ಬಹುವ್ರೀಹಿ, ಕರ್ಮಧಾರಯ.)

**II. ಖಾಲಿ ಬಿಟ್ಟಿರುವ ಸ್ಥಳಗಳನ್ನು ಸರಿಯಾದ ಪದದಿಂದ ತುಂಬಿರಿ.**

೧. ಅಳಿಯಾಸೆಗಳ ಸುಳಿಗೆ ಸಿಲುಕಿದಲೆ ____________

೨. ಒಂದು ಜೀವನಕೇಕೆ ಹಲವು ____________

೩. ನನೆಬೇಕು ಕೊನೆಬೇಕು ನರನ ____________

೪. ನರನೊಳಗೆ ____________ ರೂಪುಕಂಡು.



**III. ಈ ಪ್ರಶ್ನೆಗಳಿಗೆ ಒಂದೆರಡು ವಾಕ್ಯದಲ್ಲಿ ಉತ್ತರ ಬರೆಯಿರಿ.**

೧. 'ಮಸಗುವಂಬುಜದಂತೆ ಧ್ಯೇಯದ ಆಳ್ವೆಸಕೆ ಬಸಮಾಗು' ಎಂದರೇನು?

೨. ಒಂದು ಬಾಣಕೆ ಒಂದುಗುರಿ ಎಂಬುದು ಯಾವುದಕ್ಕೆ ಹೋಲಿಕೆಯಾಗಿ ಬಂದಿದೆ?

೩. ಯಾವುದಕ್ಕಾಗಿ ಹಗಲಿರುಳು ಹೋರಾಡಬೇಕು?

೪. ಪ್ರತಿಯೊಬ್ಬನ ಜೀವನಕ್ಕೂ ಒಂದು ಗುರಿ ಇರಬೇಕು. ಏಕೆ?

**ಭವಿಷ್ಯದ ಬಗ್ಗೆ ಯೋಚಿಸದೇ ಇದ್ದಲ್ಲಿ ನಿನಗೆ ಭವಿಷ್ಯವೇ ಇರುವುದಿಲ್ಲ – ಗಾಲ್ಸ್‌ವರ್ದಿ.**

**IV. ಈ ಪ್ರಶ್ನೆಗಳಿಗೆ ೩-೪ ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಒಂದೆ ಹೆಗ್ಗುರಿಗೆ ಹೋರಾಡು ಹಗಲಿರುಳು ಎಂದರೇನು?

೨. ಬದುಕಿನಲ್ಲಿ ಒಂದೆ ಹೆಗ್ಗುರಿಯನ್ನೇಕೆ ಇರಿಸಿಕೊಳ್ಳಬೇಕು?

೩. 'ಪರಹಿತಕೆ ಬಳಲುವುದೆ ಜೀವನವು' ಹೇಗೆ?

**V. ಸಂದರ್ಭದೊಂದಿಗೆ ವಿವರಿಸಿ.**

೧. ದಾಳಿಬಂದೊಡನೆ ಶರಣೆಂಬ ಹೆಣ್ತನವು.

೨. ದೂಡು ಬಾಳ್ವೆಯನು ಪೌರುಷದ ಹೊನಲೊಳಗೆ.

೩. ಒಂದು ಜೀವನಕೇಕೆ ಹಲವು ಸಾಧ್ಯಗಳು.

**VI. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. 'ಗುರಿ' ಪದ್ಯದ ಸಾರಾಂಶವನ್ನು ಬರೆಯಿರಿ.

೨. ನಿಮ್ಮ ಜೀವನದ ಗುರಿ ಯಾವುದು? ಅದನ್ನು ಹೇಗೆ ಸಾಧಿಸುವಿರಿ.

## ಭಾಷಾಭ್ಯಾಸ

**೧. ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ.**

ಅಳಿಯಾಸೆ, ನೆಲೆಯಿರದೆ, ದೇಹದೊಳಾತ್ಮ, ಜೀವನಕೇಕೆ, ಶರಣೆಂಬೆ

**೨. ಇವುಗಳ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ.**

ಆಸೆ, ಉಂಟು, ಪರಹಿತ, ಇರುಳು, ಮೇಲೆ.

**೩. ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಸೇರಿಸಿ ಬರೆಯುವುದನ್ನು ರೂಢಿ ಮಾಡಿಕೊಳ್ಳಿ.**

ಧ್ಯೇಯ, ಹಿಡಿದಒಳ್‌ದಾರಿ, ಮೈಸಿರಿ, ಪರಹಿತ.

## ಚಟುವಟಿಕೆ

೧. 'ನನ್ನ ಜೀವನದ ಗುರಿ' ಈ ವಿಷಯದ ಕುರಿತು ಪ್ರಬಂಧ ಬರೆಯಿರಿ.

೨. 'ಒಂದು ಬಾಣಕೆ _ _ _ _ _ _ _ _ _ _ _ _ _ _ _ ಹೋರಾಡು ಹಗಲಿರುಳು'. ಇದನ್ನು ಕಂಠಪಾಠ ಮಾಡಿರಿ.

೩. ನಿಮ್ಮೂರಿನ ಕವಿಯೊಬ್ಬರ ಸಂದರ್ಶನ ನಡೆಸಿ, ಅವರ ಸಾಹಿತ್ಯಿಕ ಬೆಳವಣಿಗೆಯ ಕುರಿತು ಒಂದು ವ್ಯಕ್ತಿ ಪರಿಚಯದ ಲೇಖನವನ್ನು ಸಿದ್ಧಗೊಳಿಸಿ ತರಗತಿಯಲ್ಲಿ ಓದಿರಿ ಮತ್ತು ಅದನ್ನು ಭಿತ್ತಿಪತ್ರಿಕೆಯಲ್ಲಿ ಪ್ರಕಟಿಸಿ. ಇದಕ್ಕೆ ನಿಮ್ಮ ಗೆಳೆಯರ ಸಹಕಾರವನ್ನು ಪೂರ್ಣವಾಗಿ ಪಡೆದುಕೊಳ್ಳಿರಿ.



**ಪಶ್ಚಾತ್ತಾಪ ಪಡದವರನ್ನು ಕ್ಷಮಿಸುವುದೆಂದರೆ ನೀರಿನ ಮೇಲೆ ಚಿತ್ರ ಬರೆದಂತೆ – ಜಪಾನಿನ ನಾಣ್ಣುಡಿ.**

# ಪದ್ಯ – ೬

# ಮಗು

**ಜಾನಪದ**

**ಪಾಠ ಪ್ರವೇಶ :** ಹೆತ್ತ ತಾಯಿಗೆ ಮಕ್ಕಳೆಲ್ಲರೂ ಸಮಾನರು. ಆದರೆ ಬಲಾಢ್ಯರು ಗೆಲ್ಲುತ್ತಾರೆ ಎಂಬ ಸಾಮಾನ್ಯ ನಿಯಮದಂತೆ ಸಮಾಜದಲ್ಲಿ ಗಂಡು ಸರ್ವಾಧಿಕಾರಿಯಾದ. ಅದರಿಂದಾಗಿ ಸಾಮಾಜಿಕ ವ್ಯವಸ್ಥೆ ಪುರುಷ ಪ್ರಧಾನವಾಗಿ ರೂಪುಗೊಂಡಿತು. ಅದಕ್ಕೂ ಹಿಂದಿದ್ದ ಮಾತೃ ಪ್ರಧಾನ ವ್ಯವಸ್ಥೆ ಸಡಿಲವಾಯಿತು. ಇದನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ 'ಜನಪದರು' ಇದರ ಬಗ್ಗೆ ತಮ್ಮ ಅನಿಸಿಕೆಗಳನ್ನು ನವಿರಾಗಿ ತಮ್ಮದೇ ನುಡಿಯಲ್ಲಿ ಅಭಿವ್ಯಕ್ತಿಸಿದ್ದು ಅರ್ಥಪೂರ್ಣವಾಗಿತ್ತು. ಅವರಿಗೆ ಹೆಣ್ಣು–ಗಂಡು ಎರಡೂ ಸಮಾನ. ಇಬ್ಬರೂ ಕುಟುಂಬ ವ್ಯವಸ್ಥೆಯಲ್ಲಿ ಮುಖ್ಯರು. ಆದುದರಿಂದಲೇ 'ಹೆಣ್ಣು ನೆರಮನೆಯ ಸಿರಿದೇವಿಯಾದರೆ ಗಂಡು ಮನೆಯ ತೊಲೆಗಂಬ' ಎಂದು ಸಾರಿದರು. ಮಗು ಯಾವುದೇ ಇರಲಿ 'ತೊಟ್ಟಿಲದ ಶಿಶುವ ಕಂಡ್ಹಸಿವು ಅಡಗೀತು' ಎಂಬ ಭಾವನೆ ಉಳ್ಳವರು. ತಾಯಿಯು ತನ್ನ ಮಕ್ಕಳನ್ನು ಹೇಗೆ ಸಮಾನವಾಗಿ ಸ್ವೀಕರಿಸುತ್ತಾಳೆ ಎಂಬುದು ಇಲ್ಲಿ ಚಿತ್ರಿತವಾಗಿದೆ. ಅದು ಎಲ್ಲರ ನಿರೀಕ್ಷೆಯೂ ಆಗಿರಬೇಕು.



ಕಂದಯ್ಯ ಅತ್ತಾರೆ ಕಣಗೀಲು ಚಿಗತಾವು
ಒಣಗಿದ್ದ ಬಾಳೆ ಚಿಗತಾವು–ಬಾಲನ
ಬರಡಾಕಳೆಲ್ಲ ಹೈನಾಗೆ. ॥೧॥

ಹಸಿವಾದ ಮಕ್ಕಳ್ಗೆ ಹತ್ತಿರೆಲ್ಲು ಮನೆಕಾಣೆ
ಹಸಿವ ಬಲ್ಲಮ್ಮ ಒಳಗಿಲ್ಲ–ತೊಟ್ಟಿಲದ
ಶಿಶುವ ಕಂಡ್ಹಸಿವು ಅಡಗೀತು. ॥೨॥

ಹೆಣ್ಣಿದ್ದ ಮನೆಗೆ ಕನ್ನಡಿ ಯಾತಕ್ಕೆ
ಹೆಣ್ಣು ಸಣ್ಣವಳು ಒಳಗಿರಲು–ನನಮಗಳು
ಕನ್ನಡಿಯಂತೆ ಹೊಳೆಯುವಳು. ॥೩॥

ಬಾಳೆಹಣ್ಣಿನ ಮಾಟ ಬಾದಾಮಿ ಎಲೆತೋಟ
ಬಾಗಿಲಾಗಾಡು ಮಗನಾಟ–ಕಲಕೇರಿ
ತೇರಿನ ಮಾಟ ಬಲು ಮಾಟ. ॥೪॥

ಕಾರ್ಯಮಾಡುವಾಗ ದಕ್ಷನಾಗಿರು; ಮಾತನಾಡುವಾಗ ಎಚ್ಚರದಿಂದಿರು; ಯೋಚಿಸುವಾಗ ದೂರದೃಷ್ಟಿಯಿಂದಿರು–ಮಾರ್ಕ್ಸ್.

ಹೆಣ್ಮಕ್ಕಳ್ಹುಟ್ಟಿದರೆ ಹೆರವರಿಗೆ ಸೊಸೆಯಕ್ಕು
ಗಂಡು ಹುಟ್ಟಿದರೆ ಮನೆಯಕ್ಕು–ಅಪ್ಪಯ್ಯ
ಎಲ್ಹೋದರೂ ನಿನ್ನ ಹೆಸರಕ್ಕು ॥೫॥

**ಜನಪದಕವಿಗಳು :** ಜನಪದಗೀತೆಗಳನ್ನು ಹಾಡಿದವರು ಯಾರೆಂದು ತಿಳಿಯದು. ಆದರೂ ಬಾಯಿಂದ ಬಾಯಿಗೆ ಅನಂತರ ಕಿವಿಗೆ ಬಂದು, ಬಳಿಕ ನೆನಪಿನ ಶಕ್ತಿಯಿಂದಲೇ ಅದನ್ನು ಹಾಡಿ ಸಾಹಿತ್ಯವನ್ನು ಉಳಿಸಿದವರು, ಓದು ಬರೆಹವನ್ನರಿಯದ ಹಳ್ಳಿಗರು. ಹಾಡುವ ಸಂದರ್ಭದಲ್ಲಿ ಅಲ್ಪಸ್ವಲ್ಪ ಬದಲಾವಣೆ ಆದದ್ದೂ ಉಂಟು. ತಮ್ಮ ಅನುಭವಕ್ಕೆ ಬಂದ ಎಲ್ಲ ಸಂಗತಿಗಳನ್ನು ವಿಮರ್ಶಿಸಿರುವುದನ್ನು ಕಾಣಬಹುದು. ಪ್ರಸ್ತುತ ಪದ್ಯಭಾಗದಲ್ಲಿ ಲಿಂಗ ಸಮಾನತೆಯನ್ನು ಕುರಿತಾದ ಅವರ ಭಾವನೆಯನ್ನು ಗಮನಿಸಬಹುದು.

## ಅರ್ಥ ತಿಳಿಯಿರಿ

**ಕಣಗೀಲು** – ಕಣಗಿಲೆ, ಒಂದು ಜಾತಿಯ ಹೂವಿನಗಿಡ. **ಚಿಗಿತಾವು** – ಚಿಗುರೀತು. **ಬರಡಾಕಳೆಲ್ಲ** – ಬರಡು + ಆಕಳು + ಎಲ್ಲ, ಗೊಡ್ಡುಹಸು. **ಮಾಟ** – ಚೆಲುವು, ರೀತಿ. **ಬಾಗಿಲಾಗಾಡು** – ಬಾಗಿಲಾಗೆ + ಆಡು, ಬಾಗಿಲಬಳಿಯಲ್ಲಿ ಆಡು. **ಹೆರವರು** – ಬೇರೆಯವರು. **ಕಲಕೇರಿ** – ಒಂದು ಊರಿನ ಹೆಸರು.

## ಅಭ್ಯಾಸ



**I. ಈ ಕೆಳಗಿನ ಪ್ರಶ್ನೆಗಳಿಗೆ ಒಂದೆರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ಬರಡಾಕಳೆಲ್ಲ ಹೈನಾಗೆ ಎಂದರೇನು?
೨. ಮಗುವಿನ ಚೆಲುವನ್ನು ಜನಪದರು ಯಾವುದಕ್ಕೆ ಹೋಲಿಸಿದ್ದಾರೆ?
೩. ಮಕ್ಕಳ ಹಸಿವನ್ನು ಬಲ್ಲವರು ಯಾರು?
೪. ಹೆಣ್ಣಿದ್ದ ಮನೆಗೆ ಯಾವುದು ಬೇಡ?

**II. ಈ ಪ್ರಶ್ನೆಗಳಿಗೆ ೩–೪ ವಾಕ್ಯಗಳಲ್ಲಿ ಉತ್ತರಬರೆಯಿರಿ.**

೧. ಕಂದಯ್ಯ ಅತ್ತಾರೆ ಆಗುವ ಅಚ್ಚರಿಗಳೇನು?
೨. ಅಪ್ಪಯ್ಯನಿಗೆ ಮಕ್ಕಳು ಹೇಗೆ ಹೆಸರು ತರುತ್ತಾರೆ?
೩. ತೊಟ್ಟಿಲದ ಶಿಶುವ ಕಂಡರೆ ಹಸಿವು ಅಡಗುವುದು ಹೇಗೆ?

**ಪುಸ್ತಕವನ್ನು ಓದುವ ಹವ್ಯಾಸದವನು ಎಲ್ಲೇ ಇದ್ದರೂ ಸಂತೋಷವಾಗಿರಬಲ್ಲ – ಗಾಂಧೀಜಿ.**

**III. ಸಂದರ್ಭದೊಂದಿಗೆ ಅರ್ಥ ಸ್ವಾರಸ್ಯವನ್ನು ಬರೆಯಿರಿ.**

೧. ಹಸಿವ ಬಲ್ಲಮ್ಮ ಒಳಗಿಲ್ಲ.

೨. ಕಲಕೇರಿ ತೇರಿನ ಮಾಟ ಬಲುಮಾಟ.

೩. ಎಲ್ಲೋದರೂ ನಿನ್ನ ಹೆಸರಕ್ಕು.

**IV. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

೧. ಮಗು ಪದ್ಯದಲ್ಲಿ ಮಕ್ಕಳ ಬಗೆಗೆ ಜನಪದರ ಅಭಿಪ್ರಾಯ ಹೇಗೆ ಚಿತ್ರಣಗೊಂಡಿದೆ?

## ಭಾಷಾಭ್ಯಾಸ

ಕಾಲ ಕಳೆಯುತ್ತಿರುವಂತೆ ಮಾತಿನಸ್ವರೂಪದಲ್ಲಿ ಕೆಲವೊಂದು ಬದಲಾವಣೆಗಳಾಗುವುದು ಸಹಜ. ಹಳಗನ್ನಡದಲ್ಲಿರುವ 'ಪ' ಕಾರವುಳ್ಳ ಪದಗಳು ನಡುಗನ್ನಡಕಾಲದಲ್ಲಿ 'ಹ' ಕಾರವನ್ನು ತಾಳಿರುವುದು ಬದಲಾವಣೆಗಳಲ್ಲೊಂದಾಗಿದೆ. ಉದಾ: ಪಾವು–ಹಾವು, ಪಲಸು–ಹಲಸು, ಅಂತಪ್ಪ–ಅಂತಹ, ಹೀಗೆಯೇ ಪೆರಂ ಎಂಬ ಶಬ್ದವು ಬಹುವಚನ ರೂಪವನ್ನು ಹೊಂದಿ 'ಪೆರವರ್' ಆದುದು 'ಹೆರವರು' ಎಂದಾಗಿದೆ ಇಂತಹ ಇನ್ನಿತರ ಪದಗಳನ್ನು ಪಟ್ಟಿ ಮಾಡಿ.

೧. **ಪದ್ಯಭಾಗದಲ್ಲಿ ಬಂದಿರುವ ಅಂತ್ಯ ಪ್ರಾಸಪದಗಳನ್ನು ಪಟ್ಟಿ ಮಾಡಿ.**

**ಉದಾ :** ನನಮಗಳು, ಹೊಳೆಯುವವಳು ಇತ್ಯಾದಿ

೨. **ಈ ಪದಗಳ ಗ್ರಾಂಥಿಕ ರೂಪ ಬರೆಯಿರಿ.**

ಯಾತಕ್ಕ, ಅತ್ತಾರೆ, ಕಂಡ್ಹಸಿವು, ಚಿಗತಾವು.



## ಚಟುವಟಿಕೆ

೧. ಜನಪದ ಗೀತೆಗಳನ್ನು ರಾಗವಾಗಿ ಹಾಡಲು ಕಲಿಯಿರಿ.

೨. ಜನಪದಗೀತೆ, ಕಥೆ, ಒಡಪು, ಗಾದೆ ಮುಂತಾದುವನ್ನು ಬಲ್ಲವರೊಂದಿಗೆ ಕೇಳಿ ಸಂಗ್ರಹಿಸಿ ನಿಮ್ಮ ಶಾಲೆಯ ಭಿತ್ತಿ ಪತ್ರಿಕೆ/ ಕೈ ಬರೆಹ ಪತ್ರಿಕೆಯಲ್ಲಿ ಪ್ರಕಟಿಸಿ.

೩. ಕರ್ನಾಟಕ ಜಾನಪದ ಅಕಾಡೆಮಿ ಪ್ರತಿವರ್ಷ ಯಾವ ಯಾವ ಕಲೆಗಳಲ್ಲಿ ಪಾರಂಗತರಾದವರಿಗೆ ಗುರುತಿಸಿ ಗೌರವಿಸುತ್ತಾರೆ ಎಂಬುದನ್ನು ತಿಳಿದು ಆ ಕಲೆಗಳನ್ನು ಪಟ್ಟಿ ಮಾಡಿ.

೪. ನಿಮ್ಮೂರಿನ ಜನಪದ ಕಲೆಯ ಬಗೆಗೆ ಮಾಹಿತಿ ಸಂಗ್ರಹಿಸಿ. ಈ ಕುರಿತು ಲೇಖನವನ್ನು ಸಿದ್ಧಗೊಳಿಸಿ ಶಾಲಾ ಭಿತ್ತಿಪತ್ರಿಕೆಯಲ್ಲಿ ಪ್ರಕಟಿಸಿ.



**ಏನಾದರು ಆಗು ಮೊದಲು ಮಾನವನಾಗು – ಕಾವ್ಯಾನಂದ.**

## ಪದ್ಯ–೭

# ವಚನಗಳು

**–ಬಸವಣ್ಣ, ಸೊನ್ನಲಿಗೆಯಸಿದ್ಧರಾಮ, ಅಕ್ಕಮಹಾದೇವಿ**

**ಪಾಠಪ್ರವೇಶ:** ಅದುವರೆಗೆ ಕಲಿತವರಿಗಷ್ಟೇ ಕಾಮಧೇನುವಂತಿದ್ದ ಕನ್ನಡ ಮಾರ್ಗಸಾಹಿತ್ಯವು ಹನ್ನೆರಡನೆಯ ಶತಮಾನದಲ್ಲಿ ಜನಪರವಾದುದಾಯಿತೆಂದರೆ ಅದಕ್ಕೆ ಕಾರಣರು ವಚನಕಾರರು.ಐವತ್ತು ವರ್ಷದ ಅವಧಿಯಲ್ಲಿ ಸುಮಾರು ಮುನ್ನೂರ ಐವತ್ತಕ್ಕೂ ಮಿಕ್ಕಿದ, ಎಲ್ಲಾವರ್ಗದ, ಸ್ತ್ರೀ ಪುರುಷರು ತಮ್ಮ ಆಡು ಮಾತುಗಳಲ್ಲೇ ವಚನಗಳನ್ನು ಹೇಳಿದುದು–ಕೇಳಿದುದು–ಬರೆದುದು ವಿಶ್ವದ ಯಾವುದೇ ಭಾಗದ ಸಾಹಿತ್ಯ ಚರಿತ್ರೆಯಲ್ಲಿಲ್ಲದ ವಿಸ್ಮಯ. ವಚನಕಾರರು ಆ ಕಾಲದಲ್ಲಿದ್ದ ಮೂಢನಂಬಿಕೆಯನ್ನು ಖಂಡಿಸುತ್ತಾ, ಸರ್ವಸಮಾನತೆಯನ್ನು ಸಾರುತ್ತಾ ಕಾಯಕತತ್ತ್ವವನ್ನು ಎತ್ತಿಹಿಡಿದು ಸಾಮಾಜಿಕ ಕ್ರಾಂತಿಯನ್ನು ಮೌನವಾಗಿಯೇ ನಡೆಸಿದರು. ಅವರ ಗುರಿಯು ವರ್ಗ ವರ್ಣರಹಿತ ಸಮಾಜ. ಅರ್ಥವಿಲ್ಲದ ಆಚರಣೆಗಳನ್ನು ದೂರವಿಟ್ಟು ಪ್ರಾಮಾಣಿಕವಾಗಿ ನಡೆಯುವುದನ್ನು ಅವರು ಬಯಸಿದ್ದರು. ಮಾತಿಗೂ ಆಚರಣೆಗೂ ಹೊಂದಿಕೆ ಇರುವ ಜೀವನವನ್ನು ಬಯಸಿದ್ದರು. ಶರಣರ ಈ ತತ್ತ್ವ ನಮ್ಮ ಅನುಸರಣೆಗೂ ಯೋಗ್ಯವಾದುದೇ ಆಗಿದೆ.

ನೀರ ಕಂಡಲ್ಲಿ ಮುಳುಗುವರಯ್ಯ
ಮರನ ಕಂಡಲ್ಲಿ ಸುತ್ತುವರಯ್ಯ
ಬತ್ತುವ ಜಲವ ಒಣಗುವ ಮರನ
ಮೆಚ್ಚಿದವರು ನಿಮ್ಮನ್ನೆತ್ತ ಬಲ್ಲರು ಕೂಡಲಸಂಗಮದೇವ.

**–ಬಸವಣ್ಣ**

ವೇಷ ಧರಿಸಿ ಫಲವೇನಯ್ಯ
ವೇಷದಂತಾಚರಣೆ ಇಲ್ಲದನ್ನಕ್ಕ
ವೇದಾಂತವನೋದಿ ಫಲವೇನಯ್ಯ
ಬ್ರಹ್ಮ ತಾನಾಗದನ್ನಕ್ಕ
ನಾನಾ ಕೆರೆಯ ತೋಡಿ ಫಲವೇನಯ್ಯ
ಪುಣ್ಯ ತೀರ್ಥಗಳು ಬರದನ್ನಕ್ಕ ಕಪಿಲಸಿದ್ಧ ಮಲ್ಲಿಕಾರ್ಜುನ

**– ಸೊನ್ನಲಿಗೆಯ ಸಿದ್ಧರಾಮ**

**ನಿನ್ನ ಹೃದಯ ಸಮುದ್ರದಲ್ಲಿ ಮೀನು ಮೊಸಳೆಗಳಷ್ಟೇ ಅಲ್ಲ, ಮುತ್ತು ರತ್ನಗಳೂ ಇವೆ, ಹುಡುಕಿ ನೋಡು – ಕಾವ್ಯಾನಂದ.**

ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ
ಧನವಿದ್ದು ಫಲವೇನು ದಯವಿಲ್ಲದನ್ನಕ್ಕ
ಹಸುವಿದ್ದು ಫಲವೇನು ಹಯನಿಲ್ಲದನ್ನಕ್ಕ
ರೂಪಿದ್ದು ಫಲವೇನು ಗುಣವಿಲ್ಲದನ್ನಕ್ಕ
ಅಗಲಿದ್ದು ಫಲವೇನು ಬಾನವಿಲ್ಲದನ್ನಕ್ಕ
ನಾನಿದ್ದು ಫಲವೇನು ನಿಮ್ಮ ಜ್ಞಾನವಿಲ್ಲದನ್ನಕ್ಕ ಚೆನ್ನಮಲ್ಲಿಕಾರ್ಜುನ

**–ಅಕ್ಕಮಹಾದೇವಿ**

**ಕವಿಪರಿಚಯ :**

**ಬಸವಣ್ಣ :** ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿದ್ದ ಬಸವಣ್ಣ ಹುಟ್ಟಿದ್ದು ವಿಜಯಾಪುರ ಜಿಲ್ಲೆಯ ಬಾಗೇವಾಡಿಯಲ್ಲಿ. ತಂದೆ ಮಾದರಸ, ತಾಯಿ ಮಾದಲಾಂಬಿಕೆ. ಬಿಜ್ಜಳನಿದ್ದ ಕಲ್ಯಾಣಕ್ಕೆ ಬಂದು ಭಕ್ತಿಭಂಡಾರಿ ಎಂದೆನಿಸಿಕೊಂಡವ. ಮುಕ್ತವಾಗಿ ಎಲ್ಲರಿಗೂ ತಮ್ಮ ತಮ್ಮ ಅನುಭವಗಳನ್ನು ಹಂಚಿಕೊಳ್ಳುವ 'ಅನುಭವ ಮಂಟಪ'ದ ರೂವಾರಿ. 'ಕಾಯಕವೇ ಕೈಲಾಸ' ಎಂದು ನಂಬಿದವ. ವರ್ಗ ಹಾಗೂ ವರ್ಣರಹಿತ ಸಮಾಜರಚನೆಯ ಕನಸು ಕಂಡವ. ಜನರಲ್ಲಿಯ ಮೌಢ್ಯ, ಅಜ್ಞಾನ, ಮೂಢನಂಬಿಕೆಗಳನ್ನು ಖಂಡಿಸಿ ಸದಾಚಾರವನ್ನು ಬೋಧಿಸುವ ಸಾವಿರಾರು ವಚನಗಳ ಕರ್ತೃ. ವಚನಗಳಲ್ಲಿ ಬರುವ ಅಂಕಿತ– **ಕೂಡಲಸಂಗಮದೇವ.**

**ಸೊನ್ನಲಿಗೆಯ ಸಿದ್ಧರಾಮ:** ಬಸವಣ್ಣನ ಸಮಕಾಲೀನ. ಊರು ಸೊನ್ನಲಿಗೆ ತಂದೆ ಮುದ್ದಗೌಡ, ತಾಯಿ ಸುಗ್ಗವ್ವೆ . ಕರ್ಮದಲ್ಲಿ ನಂಬುಗೆಯಿರಿಸಿದವನು, ಅಲ್ಲಮಪ್ರಭುವಿನಿಂದಾಗಿ ಜ್ಞಾನಯೋಗದ ಮೆಟ್ಟಿಲೇರಿ ಶಿವಜ್ಞಾನ ಸಂಪನ್ನನಾದ ವಚನಕಾರ. ಅಲ್ಲಮಪ್ರಭುಗಳ ಮಾರ್ಗದರ್ಶನ ಮತ್ತು ದರ್ಶನದಿಂದ ಅನುಭವ ಮಂಟಪದ ಒಬ್ಬ ಸಕ್ರಿಯ ಚಿಂತಕನಾದವ. ಇವನ ವಚನಗಳ ಅಂಕಿತ– **ಕಪಿಲಸಿದ್ಧ ಮಲ್ಲಿಕಾರ್ಜುನ.**

**ಅಕ್ಕಮಹಾದೇವಿ:** ಕಾಲ ಹನ್ನೆರಡನೆಯ ಶತಮಾನದ ಮಧ್ಯಭಾಗ. ಬಹುದೊಡ್ಡ ಶಿವಶರಣೆ. ಕನ್ನಡ ಸಾಹಿತ್ಯದ ಮೊದಲನೆಯ ಕವಯಿತ್ರಿ. ಶಿವಮೊಗ್ಗ ಜಿಲ್ಲೆಯ ಉಡುತಡಿ– ಹುಟ್ಟೂರು. ಸಂಪ್ರದಾಯವನ್ನು ಧಿಕ್ಕರಿಸಿ ಅಲೌಕಿಕ ನೆಲೆಯಲ್ಲಿ ನಿಂತ ದಿಟ್ಟ ಮಹಿಳೆ. ಅಲ್ಲಮನಿಂದ **'ವೈರಾಗ್ಯನಿಧಿ'** ಎಂದು ಕರೆಯಿಸಿಕೊಂಡವಳು. ಈಕೆಯ ವಚನಗಳು ಭಕ್ತಿ, ವೈರಾಗ್ಯ, ಜ್ಞಾನ ಸಂಪನ್ನವಾಗಿದ್ದರೂ ಕಾವ್ಯ ಸೌಂದರ್ಯದಿಂದ ಮೋಹಕವಾಗಿವೆ. ಚೆನ್ನಮಲ್ಲಿಕಾರ್ಜುನನನ್ನೇ ಪತಿಯೆಂದು ನಂಬಿದವಳು. ಕದಳಿ ಬನದಲ್ಲಿ ಐಕ್ಯಳಾದವಳು. **'ಚೆನ್ನಮಲ್ಲಿಕಾರ್ಜುನ'** ಎಂಬುದು ಈಕೆಯ ವಚನಗಳ ಅಂಕಿತ.

**ಪುಸ್ತಕ ಪ್ರೇಮವಿಲ್ಲದವನು ಹಣವಂತನಾದರೂ ದರಿದ್ರನೇ – ಲಾಂಗ್ಫೋರ್ಡ್.**

## ಅರ್ಥ ತಿಳಿಯಿರಿ

**ಹಯನು**– ಹಾಲು, ಹಾಲಿಗೆ ಸಂಬಂಧಿಸಿದ್ದು. **ಅಗಲು**– ಊಟದ ಬಟ್ಟಲು. **ಬಾನ**– ಅನ್ನ. **ಅನ್ನಕ್ಕ**– ತನಕ.

## ಅಭ್ಯಾಸ

**I. ಒಂದೆರಡು ವಾಕ್ಯದಲ್ಲಿ ಉತ್ತರ ಬರೆಯಿರಿ.**

1. ಯಾರು ಕೂಡಲಸಂಗಮನನ್ನು ಅರಿಯಲಾರರು?
2. ವೇಷ ಧರಿಸಿದ ಮೇಲೆ ಹೇಗಿರಬೇಕು?
3. ಧನವಿದ್ದವರಲ್ಲಿ ಇರಬೇಕಾದ ಗುಣಯಾವುದು?
4. ಯಾವಾಗ ಕೆರೆಯನ್ನು ತೋಡಿದ್ದು ನಿಷ್ಫಲವಾಗುತ್ತದೆ?

**II. ಈ ಪ್ರಶ್ನೆಗಳಿಗೆ 3–4 ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1. ಬಸವಣ್ಣನವರು ಕುರುಡು ಸಂಪ್ರದಾಯವನ್ನು ಹೇಗೆ ಲೇವಡಿ ಮಾಡಿದ್ದಾರೆ?
2. 'ರೂಪಿದ್ದು ಫಲವೇನು ಗುಣವಿಲ್ಲದನ್ನಕ್ಕ' – ಈ ಮಾತಿನ ಅರ್ಥವೈಶಿಷ್ಟ್ಯವೇನು?
3. ಚೆನ್ನಮಲ್ಲಿಕಾರ್ಜನನ ಜ್ಞಾನವಿಲ್ಲದೆ ತನಗೆ ಫಲವಿಲ್ಲವೆಂದು ಅಕ್ಕ ಏಕೆ ಹೇಳುತ್ತಾಳೆ?

**III. ಸಂದರ್ಭದೊಡನೆ ಅರ್ಥ ಸ್ವಾರಸ್ಯವನ್ನು ಉತ್ತರ ಬರೆಯಿರಿ.**



1. ನೀರಕಂಡಲ್ಲಿ ಮುಳುಗುವರಯ್ಯ.
2. ಅಗಲಿದ್ದು ಫಲವೇನು ಬಾನವಿಲ್ಲದನ್ನಕ್ಕ.
3. ಬತ್ತುವ ಜಲವ ಒಣಗುವ ಮರನ ಮೆಚ್ಚಿದವರು.

**IV. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರ ಬರೆಯಿರಿ.**

1. ಶರಣರ ವಚನಗಳಲ್ಲಿಯ ಸ್ವಾರಸ್ಯವನ್ನು ವಿವರಿಸಿ.
2. ಅಕ್ಕಮಹಾದೇವಿಯ ವಚನದಲ್ಲಿಯ ವಿಚಾರಗಳು ಇಂದೂ ಪ್ರಸ್ತುತವೇ? ವಿವರಿಸಿ
3. ಈ ಮೂರು ವಚನಗಳಲ್ಲಿ ನಿಮಗೆ ಇಷ್ಟವಾದ ವಚನ ಯಾವುದು? ಏಕೆ?

## ಭಾಷಾಭ್ಯಾಸ

1. **ಕಾಡು**– ಅರಣ್ಯ (ನಾಮಪದ) ಪೀಡಿಸು (ಕ್ರಿಯಾಪದ)

**ಕೆರೆ – ನೀರು ನಿಂತ ಸ್ಥಳ** (ನಾಮಪದ) **ತುರಿಸು– ಕೆತ್ತು** (ಕ್ರಿಯಾಪದ)

**ಅಗಲು**– ಊಟದ ತಟ್ಟೆ(ನಾಮಪದ) ಕ್ರಿಯಾಪದವಾದಾಗ–ದೂರವಾಗು.

**ಕ್ರಮತಪ್ಪಿ ನಡೆವುದರಿಂದ ಕಷ್ಟವಿನ್ನುಂಟೆ – ನಿಜಗುಣ ಶಿವಯೋಗಿ.**

ಒಂದೇ ಪದವು ನಾಮಪದವೂ ಕ್ರಿಯಾಪದವೂ ಆಗಿ ನಮ್ಮ ಭಾಷೆಯಲ್ಲಿ ಪ್ರಯೋಗಗೊಳ್ಳುತ್ತಿದೆ. ಮೇಲಿನ ಪದಗಳಂತೆ ಇನ್ನಿತರ ಪದಗಳನ್ನು ಬರೆದು ಅವುಗಳ ಅರ್ಥವ್ಯತ್ಯಾಸವನ್ನು ತಿಳಿಯಿರಿ.

**2. ಇವುಗಳ ವಿರುದ್ಧಾರ್ಥಕ ಪದಗಳನ್ನು ಬರೆಯಿರಿ**

ಫಲ, ಸುಗುಣ, ಪುಣ್ಯ, ಜ್ಞಾನ.

**3. ಇವುಗಳ ಪರ್ಯಾಯ ಪದಗಳನ್ನು ಬರೆಯಿರಿ. (ಅರ್ಥಕೋಶದ ಸಹಾಯ ಪಡೆಯಿರಿ).**

ಮರ, ಧನ, ಬ್ರಹ್ಮ, ಹಸು.

**4 ಇವುಗಳ ಸಂಸ್ಕೃತ ರೂಪವನ್ನು ಬರೆಯಿರಿ.**

ಬೊಮ್ಮ, ಹಸು, ಬಾನ.

## ಚಟುವಟಿಕೆ

1. ಬೇರೆ ಬೇರೆ ವಚನಕಾರರ ಅಂಕಿತಗಳನ್ನು ತಿಳಿದುಕೊಳ್ಳಿರಿ.
2. ಅರ್ಥ ಕೆಡದಂತೆ ವಚನಗಳನ್ನು ಹಾಡಲು ಕಲಿಯಿರಿ.
3. ಇದೇ ರೀತಿಯಲ್ಲಿ ನೀವೂ ವಚನಗಳನ್ನು ಬರೆಯಲು ಪ್ರಯತ್ನಿಸಿ.

**5. ಈ ಪದ್ಯವನ್ನು ಕಂಠಪಾಠ ಮಾಡಿರಿ.**

ನೀರಕಂಡಲ್ಲಿ .................. ಕೂಡಲ ಸಂಗಮದೇವ.



**ಮಾನವಕುಲಂ ಒಂದೆ ವಲಂ – ಪಂಪ.**

# ಪದ್ಯ–೮

# ನಿಟ್ಟೋಟದಲಿ ಹಾಯ್ದನು ಬಿಟ್ಟಮಂಡೆಯಲಿ

*– ಗದುಗಿನ ನಾರಣಪ್ಪ*

**ಪಾಠ ಪ್ರವೇಶ:** ಸುಮಾರು ಒಂದುವರೆ ಸಾವಿರ ವರ್ಷಗಳಿಗಿಂತಲೂ ಮಿಗಿಲಾದ ಇತಿಹಾಸವಿರುವ ಕನ್ನಡ ಸಾಹಿತ್ಯವು ವಸ್ತು, ಪ್ರಕಾರ, ಕಾವ್ಯಮಾರ್ಗ, ಛಂದಸ್ಸು ಇತ್ಯಾದಿಗಳ ದೃಷ್ಟಿಯಿಂದ ಶ್ರೀಮಂತವಾಗಿದೆ. ಇಷ್ಟೊಂದು ದೀರ್ಘಕಾಲದ ಸಾಹಿತ್ಯಚರಿತ್ರೆಯ ಅಧ್ಯಯನಕ್ಕಾಗಿ ಇದನ್ನು ಹಲವು ರೀತಿಯಲ್ಲಿ ವಿಭಾಗಿಸಿಕೊಳ್ಳಲಾಗಿತ್ತು. ಅವುಗಳಲ್ಲಿ ಒಂದು–ಕಾವ್ಯಭಾಷೆಯನ್ನು ಆಧಾರವಾಗಿಸಿಕೊಂಡದ್ದು. ಪಂಪ ಮೊದಲಾದವರ ಕಾವ್ಯಗಳು ಹಳಗನ್ನಡ ಕಾಲದ್ದು. ವಚನಯುಗ ಅನಂತರದ್ದು – ಅದು ನಡುಗನ್ನಡ, ಆಧುನಿಕ ಯುಗದ್ದು ಹೊಸಗನ್ನಡ. ನಡುಗನ್ನಡಯುಗದ ಶ್ರೇಷ್ಠ ಕಾವ್ಯಗಳಲ್ಲಿ ಒಂದು–ಗದುಗಿನ ಭಾರತ. ಆಡುನುಡಿಗಿಂತ ಭಿನ್ನವಾದ ಆ ಕಾಲದ ಕಾವ್ಯಭಾಷೆಯ ಸ್ವರೂಪಕ್ಕೆ ಇದು ಸಾಕ್ಷಿಯಾಗಿದೆ.

ಬರಿಯ ಬಾಯಿಯ ಬಡಿವಾರಕ್ಕಿಂತ ಕಾರ್ಯದಲ್ಲಿ ಮಾಡಿತೋರಿಸುವುದೇ ಮುಖ್ಯ; ಇತರರ ನಗೆಪಾಟಲಿಗೆ ಗುರಿಯಾಗುವ ಬದುಕು ಬೇಡ; ಬೃಹನ್ನಳೆಯೇ ಆಗಿದ್ದರೂ ಅರ್ಜುನನ ಹಾಗೆ ಧೀಮಂತರಾಗಬೇಕು–ಇವು ನಮ್ಮ ಧ್ಯೇಯವಾಗಬೇಕು.

**ಕಥಾಸಂದರ್ಭ:** ಹನ್ನೆರಡು ವರ್ಷಗಳ ವನವಾಸವನ್ನು ಮುಗಿಸಿದ ಪಾಂಡವರು ಒಂದು ವರ್ಷದ ಅಜ್ಞಾತವಾಸಕ್ಕಾಗಿ ವೇಷಾಂತರದಲ್ಲಿ ವಿರಾಟನ ನಗರವಾದ ಮತ್ಸ್ಯದೇಶಕ್ಕೆ ಬಂದಿದ್ದಾರೆ. ಅದೂ ಮುಗಿಯುತ್ತಾ ಬಂದಿದೆ. ಆ ಕಾಲದಲ್ಲಿಯೆ ಕಾಮುಕನಾದ ಕೀಚಕನ ವಧೆಯು ಭೀಮನಿಂದಾದಾಗ ಕೌರವನಿಗೆ ಅನುಮಾನ ಬಂದಿತು. ಅದನ್ನು ಪರಿಹರಿಸಿಕೊಳ್ಳಲು ಕುರುಪತಿಯು ಸೇನಾಸಮೇತನಾಗಿ ಬಂದು ದಕ್ಷಿಣ ದಿಕ್ಕಿನಲ್ಲಿ ವಿರಾಟನ ಗೋವುಗಳನ್ನು ಅಪಹರಿಸುತ್ತಾನೆ. ಯುದ್ಧವೂ ಆಗುತ್ತದೆ. ಮರುದಿನ, ಉತ್ತರ ದಿಕ್ಕಿನ ಗೋಗ್ರಹಣವೂ ನಡೆದಾಗ ಆ ಸುದ್ದಿಯು ಹೆಂಗಳೆಯರ ಮುಂದೆ ಜಂಬಕೊಚ್ಚಿಕೊಳ್ಳುತ್ತಿರುವ ವಿರಾಟನ ಮಗನಾದ ಉತ್ತರನಿಗೆ ಮುಟ್ಟುತ್ತದೆ. ಆಗ ಆತನು ತನ್ನ ಸಾಮರ್ಥ್ಯಕ್ಕೆ ಸಮನಾದ ಸಾರಥಿಯು ಸಿಕ್ಕರೆ ಕೌರವನೆಷ್ಟರವನು ಎನ್ನುತ್ತಿರುವಾಗ ಉತ್ತರೆಯ ಮೂಲಕ ಬೃಹನ್ನಳೆಯು ರಾಜಕುಮಾರನ ಸಾರಥಿಯಾಗುತ್ತಾನೆ. ರಥವು ರಣರಂಗದತ್ತ ಸಾಗುತ್ತದೆ. ಮುಂದೆ ಹೋದಾಗ ಉತ್ತರನು ಕೌರವನ ಭಯಂಕರವಾದ ಸೈನ್ಯವನ್ನು ಕಾಣುತ್ತಾನೆ. ಅದನ್ನು ನೋಡಿದ ಉತ್ತರನು ಹೀಗೆ ಹೇಳುತ್ತಾನೆ.

ಕಡೆಗೆ ಹಾಯವು ಕಂಗಳೀ ಬಲ  
ಗಡಲ ಮನವೀಸಾಡಲಾರದು  
ವೊಡಲುವಿಡಿದಿರಲೇನ ಕಾಣಲು ಬಾರದದ್ಭುತವ  
ಪೊಡವಿಯಿದುದೊ ಮೋಹರವನಿದ  
ರೊಡನೆ ಕಾದುವನಾವನಾತನೆ  
ಮೃಡನು ಶಿವಶಿವ ಕಾದಿಗೆಲಿದೆವು ಬಲಕೆ ನಮೊಯೆಂದ ॥೧॥

**ಮಾತೆಂಬುದು ಜ್ಯೋತಿರ್ಲಿಂಗ – ಅಲ್ಲಮಪ್ರಭು**

ಎಂದೊಡರ್ಜುನ ನಗುತ ರಥವನು
ಮುಂದೆ ನಾಲ್ಕೆಂಟಡಿಯ ನೂಕಲು
ಕೊಂದನೀ ಸಾರಥಿಯೆನುತ ಸಂವರಿಸಿ ಮುಂಜೆರಗ
ಬಂದು ಮೆಲ್ಲನೆ ರಥದ ಹಿಂದಕೆ
ನಿಂದು ಧುಮ್ಮಿಕ್ಕಿದನು ಬದುಕಿದೆ
ನೆಂದು ನಿಟ್ಟೋಟದಲಿ ಹಾಯ್ದನು ಬಿಟ್ಟಮಂಡೆಯಲಿ ॥೨॥





ಮನದಲೊಡಲೊಡೆವಂತೆ ನಗುತಲ
ರ್ಜುನನು ಗಜರಿದನೆಲವೊ ಸಭೆಯಲಿ
ವನಜಮುಖಿಯರ ಮುಂದೆ ಸೊರಹಿದೆ ಬಾಯ್ಗೆ ಬಂದಂತೆ
ಅನುವರದೊಳೇನಾಯ್ತು ರಿಪುವಾ
ಹಿನಿಯನಿರಿಯದೆ ನಾಡ ನರಿಯವೊ
ಲೆನಗೆ ನೀ ಹಲುಗಿರಿಯೆ ಬಿಡುವೆನೆ ಕಾದು ನಡೆಯೆಂದ ॥೩॥

ಧುರದಲೋಡಿದ ಪಾತಕವ ಭೂ
ಸುರರು ಕಳೆದಪರಶ್ವಮೇಧವ
ಧರಣಿಯಲಿ ಪ್ರತ್ಯಕ್ಷವಾಗಿಯೆ ಮಾಡಬಹುದೆಮಗೆ
ಸುರರ ಸತಿಯರನೊಲ್ಲೆವೆಮಗೆ
ಮ್ಮರಮನೆಯ ನಾರಿಯರೆ ಸಾಕೆ
ಮ್ಮರಸುತನವೆಮಗಿಂದ್ರ ಪದವಿಯು ಬಿಟ್ಟುಕಳುಹೆಂದ ॥೪॥

**ಕುಲಮಂ ನಾಲಗೆ ಅರುಹಿತು – ಪಂಪ.**



**ನಾರಣಪ್ಪ**, ಊರು: ಗದುಗಿನ ಕೋಳಿವಾಡ. ಕಾಲ: ಸುಮಾರು ೧೪೩೦. ಕೃತಿಗಳು: **ಕರ್ಣಾಟ ಭಾರತ ಕಥಾಮಂಜರಿ**. ಇದಕ್ಕೆ **'ಗದುಗಿನ ಭಾರತ'**ವೆಂಬ ಹೆಸರೂ ಇದೆ. ಐರಾವತ ಕೃತಿಯೂ ಇವನದೆಂದು ಹೇಳಲಾಗಿದೆ. ವ್ಯಾಸರು ಸಂಸ್ಕೃತದಲ್ಲಿ ರಚಿಸಿರುವ 'ಭಾರತ'ವನ್ನು ಕನ್ನಡದಲ್ಲಿ ಬರೆದವನಾದುದರಿಂದ ಕುಮಾರವ್ಯಾಸನೆಂಬ ಅಭಿದಾನವನ್ನು ಹೊಂದಿದ್ದಾನೆ. ಕಾವ್ಯದ ಉದ್ದಕ್ಕೂ ರೂಪಕಾಲಂಕಾರವನ್ನು ಬಹಳವಾಗಿ ಬಳಸಿದವನಾದುದರಿಂದ ಈತನು **'ರೂಪಕ ಸಾಮ್ರಾಜ್ಯ ಚಕ್ರವರ್ತಿ'**ಯೂ ಹೌದು. ಗದುಗಿನ ಭಾರತವು ಭಾಮಿನಿಷಟ್ಪದಿಯಲ್ಲಿದೆ. ಪ್ರಸ್ತುತ ಪದ್ಯವನ್ನು ಗದುಗಿನ ಭಾರತದಿಂದ ಆಯ್ದುಕೊಂಡಿದೆ.

## ಅರ್ಥ ತಿಳಿಯಿರಿ

**ಪದ್ಯ–೧. ಕಡೆ**–ಕೊನೆ, **ಹಾಯವು**–ದಾಟದು, ತಾಗದು. **ಬಲಗಡಲು** – ಬಲ+ಕಡಲು–ಆದೇಶಸಂಧಿ. **ಬಲವೆಂಬಕಡಲು**–ಕರ್ಮಧಾರಯ ಸಮಾಸ. **ಬಲ**–ಸೈನ್ಯ. **ಕಡಲು**–ಸಮುದ್ರ. **ಮನವೀಸಾಡಲಾರದು**–ಮನವು+ಈಸಾಡಲು+ಆರದು–ಮನವು ಈಜಲಾರದು. **ಒಡಲುವಿಡಿದಿರಲೇನ**–ಒಡಲು+ಪಿಡಿ–ಒಡಲುವಿಡಿ–ಅದೇಶಸಂಧಿ. ಒಡಲು+ಪಿಡಿದು+ಇರಲು+ಏನು–ದೇಹವನ್ನು ಹೊಂದಿ ಇರುವಾಗ ಏನನ್ನು. **ಪೊಡವಿ**–(ತದ್ಭವ), ಪೃಥ್ವಿ (ಸಂಸ್ಕೃತ)–ಭೂಮಿ. **ಈ**–ಹೆರು, ಕೊಡು, ಈ–ಧಾತು, ಇತ್ತನು–ಕ್ರಿಯಾಪದ. **ಈದುದೋ**–ಹೆತ್ತಿದೆಯೋ, ಮರಿಹಾಕಿದೆಯೋ. **ಮೋಹರ**–ಸೈನ್ಯ. **ಮೃಡ**–ಶಿವ. **ಕಾದಿಗೆಲಿದೆವು**–ಯುದ್ಧಮಾಡಿ ಗೆದ್ದಂತೆಯೇ.

**ಪದ್ಯ–೨, ಸಂವರಿಸಿ**–ಸಜ್ಜುಗೊಳಿಸಿ, ಒಟ್ಟುಗೂಡಿಸಿ. **ಮುಂಜೆರಗು– ಸೆರಗಮುಂದು**– (ಅಂಶಿ ಸಮಾಸ) ಮುಂ +ಸೆರಗು–ಮುಂಜೆರಗು–ಆದೇಶ. **ನಿಟ್ಟೋಟ**–ನಿಡಿದು ಓಟ– ಕರ್ಮಧಾರಯ ಸಮಾಸ. **ಬಿಟ್ಟಮಂಡೆ**–ಕೆದರಿದ ತಲೆ.

**ಪದ್ಯ–೩ ಮನದಲೊಡಲೊಡೆವಂತೆ**–ಮನದಲಿ+ಒಡಲು+ಒಡೆವಂತೆ, **ಒಡಲು**–ದೇಹ, ಶರೀರ. **ಗಜರು**–ಗದರಿಸು. **ವನಜ**–ಜಲದಲ್ಲಿ ಜನಿಸಿದ್ದು–ತಾವರೆ. **ವನಜಮುಖಿ**–ತಾವರೆಯಂತೆ ಮುಖ ಉಳ್ಳವಳು, **ಸೊರಹು**–ಬಾಯಿಗೆ ಬಂದಂತೆ ಹೇಳು. **ಅನುವರದೊಳೇನಾಯ್ತು**–ಅನುವರದೊಳು+ಏನು+ಆಯ್ತು **ಅನುವರ**–ಯುದ್ಧ. **ರಿಪು**–ಶತ್ರು. **ವಾಹಿನಿ**–ಸೈನ್ಯ. **ಹಲುಗಿರಿಯೆ**–ಹಲು+ಕಿರಿಯೆ–ಆದೇಶ ಸಂಧಿ. **ನಾಡ ನರಿ**–ಊರಿನ ನರಿ. ಅಂಜುಬುರುಕ ನರಿ.

**ಪದ್ಯ–೪ ಧುರದಲೋಡಿದ**–ಧುರದಲಿ+ಓಡಿದ **ಧುರ** – ಯುದ್ಧ. **ಪಾತಕ**–ಪಾಪ **ಧರಣಿ** – ಭೂಮಿ, **ಭೂಸುರರು**–ಭೂಮಿಯ ಸುರರು –(ಷಷ್ಠಿತತ್ಪುರುಷ ಸಮಾಸ) ಬ್ರಾಹ್ಮಣರು. **ಸುರರಸತಿ** – ದೇವಸ್ತ್ರೀ, ಅಪ್ಸರೆ. **ಸತಿಯರನೊಲ್ಲೆವೆಮಗೆಮ್ಮರಮನೆಯ**–ಸತಿಯರನು+ಒಲ್ಲೆವು+ಎಮಗೆ+ಎಮ್ಮ+ಅರಮನೆಯ. **ಸಾಕೆಮ್ಮರಸುತನವೆಮಗಿಂದ್ರ**.–ಸಾಕು+ಎಮ್ಮ+ಅರಸುತನವು+ಎಮಗೆ+ಇಂದ್ರ **ಇಂದ್ರಪದವಿ**– ಇಂದ್ರನ ಪದವಿ –ಷಷ್ಠಿತತ್ಪುರುಷ ಸಮಾಸ.

## ಗಮನಿಸಿ

**ಅಶ್ವಮೇಧ** : ಕುದುರೆಯನ್ನು ಬಲಿಕೊಟ್ಟು ಮಾಡುವ ಯಾಗ. ಹಿಂದೆ ಪಾಂಡವರು ಮತ್ತು ಶ್ರೀರಾಮಚಂದ್ರನು ಈ ಯಾಗ ಮಾಡಿದ್ದರು. ಯಾಗ ನಿರ್ವಹಣೆಗಾಗಿ ಅಪಾರ ಸಂಪತ್ತು ಬೇಕಾಗಿರುವುದರಿಂದ

**ಉತ್ತಮ ಗ್ರಂಥಗಳು ನಾಡಿನ ಸಂಸ್ಕೃತಿಯ ಪ್ರತೀಕ – ನೆಹರು.**

ಪೂಜಿಸಿದ ಅಶ್ವವನ್ನು ಒಂದು ವರ್ಷದ ಅವಧಿಯವರೆಗೆ ದೇಶ ಸಂಚಾರಕ್ಕೆ ಬಿಡುವುದುಂಟು. ಕಾದದೆ ಗೌರವಿಸಿದವರು, ಕುದುರೆಯನ್ನು ಗರ್ವದಿಂದ ಕಟ್ಟಿ ಕಾದಿ ಸೋತವರು ಸಂಪತ್ತನ್ನು ನೀಡುತ್ತಾರೆ, ಸಾಮಾನ್ಯವಾಗಿ ಮಹಾಶೂರರೇ ಈ ಯಾಗವನ್ನು ಕೈಗೊಳ್ಳುತ್ತಿದ್ದುದರಿಂದ ಅವರಿಗೇ ಜಯಪ್ರಾಪ್ತಿಯಾಗುತ್ತಿತ್ತು.

**ಇಂದ್ರಪದವಿ.** ನೂರು ಯಾಗಗಳನ್ನು ಮಾಡಿದವರಿಗೆ ಈ ಪದವಿ ಸಿಗುತ್ತದೆ.

## ಅಭ್ಯಾಸ

**I. ಒಂದೆರಡು ವಾಕ್ಯದಲ್ಲಿ ಉತ್ತರಿಸಿ.**

೧. ಉತ್ತರನ ಮಾತಿನಂತೆ ಅದ್ಭುತವನ್ನು ಕಾಣಲು ಮೊದಲಾಗಿ ಇರಬೇಕಾದುದೇನು?

೨. ಕೌರವನ ಸೇನೆಯು ಉತ್ತರನಿಗೆ ಹೇಗೆ ಕಾಣಿಸಿತು?

೩. ಉತ್ತರನು ನಿಟ್ಟೋಟದಲ್ಲಿ ಓಡಿದ್ದು ಏಕೆ?

೪. ಧುರಕ್ಕೆ ಬೆನ್ನುಹಾಕಿದರೆ ಏನು ಪ್ರಾಪ್ತಿಯಾಗುತ್ತದೆ?

೫. ಇಲ್ಲಿ ಯಾರು ನಾಡನರಿಯಾಗಿದ್ದಾರೆ?

೬. ಉತ್ತರನಿಗೆ ಇಂದ್ರಪದವಿಯು ಏಕೆ ಬೇಕಿಲ್ಲ?

೭. ಸುರರ ಸತಿಯರ ಸ್ಥಾನವನ್ನು ಯಾರು ತುಂಬುತ್ತಾರೆ?

**II. ಈ ಪ್ರಶ್ನೆಗಳಿಗೆ ೩–೪ ವಾಕ್ಯಗಳಲ್ಲಿ ಉತ್ತರಿಸಿ**

೧. ಶತ್ರುಬಲಕೆ 'ನಮೋ' ಎಂದು ಉತ್ತರನು ಏಕೆ ಹೇಳಿದನು?

೨. ಒಡಲು ಒಡೆವಂತೆ ಅರ್ಜುನನು ಮನದಲಿ ನಗಲು ಕಾರಣವೇನು?

೩. 'ಕಾದುನಡೆ' ಎಂದು ಅರ್ಜುನನು ಉತ್ತರನನ್ನು ಏಕೆ ಒತ್ತಾಯಿಸಿದನು?

೪. ಯುದ್ಧವನ್ನು ಮಾಡದೆಯೆ ಸುಖಪಡಬಹುದೆಂಬುದನ್ನು ಉತ್ತರನು ಹೇಗೆ ಸಮರ್ಥಿಸಿದನು?

೫. ಉತ್ತರನ ಈ ಕಾರ್ಯವನ್ನು ನೀನು ಸಮರ್ಥಿಸುವಿಯಾ? ಕಾರಣಕೊಡಿ.



**III. ಸಂದರ್ಭದೊಂದಿಗೆ ಅರ್ಥವಿಶೇಷವನ್ನು ಬರೆಯಿರಿ.**

೧. ಶಿವ ಶಿವ ಕಾದಿಗೆಲಿದೆವು.

೨. ನಿಟ್ಟೋಟದಲಿ ಹಾಯ್ದನು ಬಿಟ್ಟ ಮಂಡೆಯಲಿ.

೩. ನಾಡ ನರಿಯವೊಲು ಹಲುಗಿರಿಯೆ ಬಿಡುವೆನೆ.

೪. ಎಮ್ಮರಮನೆಯ ನಾರಿಯರೆ ಸಾಕು.

**IV. ಸುಮಾರು ಹತ್ತು ವಾಕ್ಯಗಳಲ್ಲಿ ಉತ್ತರಿಸಿ**

೧. ಅರ್ಜುನ ಮತ್ತು ಉತ್ತರ ಇವರ ಸಂಭಾಷಣೆಯ ಸ್ವಾರಸ್ಯವನ್ನು ಬರೆಯಿರಿ

೨. ಅರ್ಜುನ ಮತ್ತು ಉತ್ತರ ಇವರ ಗುಣ ಸ್ವಭಾವದಲ್ಲಿಯ ವ್ಯತ್ಯಾಸವನ್ನು ಬರೆಯಿರಿ

**ಓದು ಒಕ್ಕಾಲು ಬುದ್ಧಿ ಮುಕ್ಕಾಲು – ಗಾದೆ.**

## ಭಾಷಾಭ್ಯಾಸ

ಒಂದು ಪದಕ್ಕೆ ಒಂದೇ ಅರ್ಥ ಎಂದೇನು ಇಲ್ಲ. ಎರಡು, ಮೂರು ಹೀಗೆ ಎಷ್ಟೂ ಅರ್ಥಗಳಿರಬಹುದು. ಕೆಲವು ಪದಗಳು ಕ್ರಿಯಾಪದವೂ ನಾಮಪದವೂ ಆಗಿರುವಾಗ ಸಹಜವಾಗಿಯೇ ಅರ್ಥಭಿನ್ನತೆಯನ್ನು ಹೊಂದಿರುತ್ತವೆ. ಅದನ್ನು ಸಂದರ್ಭನೋಡಿ ಅರ್ಥಮಾಡಿಕೊಳ್ಳಬೇಕಾಗುತ್ತದೆ.

೧) ಈ ಪದಗಳ ಅರ್ಥಕ್ಕೆ ಸರಿಹೊಂದುವ ಪದಗಳನ್ನು ಈ ಪದ್ಯಭಾಗದಿಂದ ಆರಿಸಿ ಬರೆಯಿರಿ.
ಸೈನ್ಯ, ಹೆಣ್ಣು, ಯುದ್ಧ, ಭೂಮಿ.

೨) ಈ ಪದಗಳಿರುವ ಬೇರೆ ಅರ್ಥವನ್ನು ಬರೆಯಿರಿ.
ಕಾದು, ಸತಿ, ನಾರಿ, ಶಿವ

೩) ಕನ್ನಡದ ಕವಿಗಳು ಸಂಸ್ಕೃತದಲ್ಲೂ ಪಂಡಿತರಾಗಿದ್ದುದರಿಂದ ಅವರ ಕಾವ್ಯಗಳಲ್ಲಿ ಸಂಸ್ಕೃತಪದಗಳು ಧಾರಾಳವಾಗಿ ಬಂದುವು. ಮೊಗಲರ ಆಳ್ವಿಕೆಯ ಕಾಲದಲ್ಲಿ ಅವರ ಆಡಳಿತ ಪದಗಳು ಕನ್ನಡಕ್ಕೆ ಬಂದುವು. ಆಂಗ್ಲಪ್ರಭುತ್ವ ಮತ್ತು ಇಂಗ್ಲೀಷ್ ಶಿಕ್ಷಣದಿಂದಾಗಿ ಇಂಗ್ಲಿಷ್ ಪದಗಳು ಕನ್ನಡದಲ್ಲಿ ಸೇರಿವೆ. ಈ ಪದ್ಯಭಾದಲ್ಲಿ ೨೮ ಸಂಸ್ಕೃತ ಪದಗಳಿವೆ ಅದನ್ನು ಪಟ್ಟಿ ಮಾಡಿ.

೪) ಈ ಪದ್ಯಭಾಗದಲ್ಲಿರುವ ತದ್ಭವ ಪದಗಳನ್ನು ಪಟ್ಟಿಮಾಡಿ.

೫) ಈ ಕೆಳಗಿನವುಗಳನ್ನು ವಿಂಗಡಿಸಿ ಸಮಾಸದ ಹೆಸರನ್ನು ಬರೆಯಿರಿ.
ಅರಮನೆ, ಹಲುಗಿರಿ, ವನಜಮುಖಿ, ನಿಟ್ಟೋಟ, ಬಲಗಡಲು



## ಚಟುವಟಿಕೆ

೧) ಕುಮಾರವ್ಯಾಸ ಭಾರತದ ವಿರಾಟಪರ್ವಭಾಗದಿಂದ ಆಯ್ದ ಈ ಪದ್ಯಗಳ ನಡುವೆ ಇನ್ನೂ ಕೆಲವು ಪದ್ಯಗಳು ಇವೆ. ಅವು ರಾಜಕುಮಾರನ ವರ್ತನೆ, ಅದಕ್ಕೆ ಅರ್ಜುನನ ಉತ್ತರ–ಪರಿಹಾಸ ಇತ್ಯಾದಿ ವಿಷಯಗಳನ್ನೊಳಗೊಂಡಿವೆ. ಆ ಪದ್ಯಗಳನ್ನು ಓದಿ ಅವುಗಳ ಸ್ವಾರಸ್ಯವನ್ನು ತಿಳಿಯಿರಿ.

೨) ಗಮಕಕ್ಕೆ ( ಒಂದು ಬಗೆಯ ಗಾಯನ) ಭಾಮಿನಿ ಷಟ್ಪದಿಯು ಅತ್ಯಂತ ಸೂಕ್ತವಾದುದು. ಗಮಕದ ಅಡಕ ಮುದ್ರಿಕೆ (ಸಿ.ಡಿ)ಗಳು ಲಭ್ಯ. ಆ ಹಾಡನ್ನು ಕೇಳಿ ಈ ಪದ್ಯಗಳನ್ನು ಹಾಡಲು ಕಲಿಯಿರಿ.

೩) ಇಲ್ಲಿ ಕೊಟ್ಟಿರುವ ಪದ್ಯಗಳ ಜೊತೆಯಲ್ಲಿ ಕುಮಾರವ್ಯಾಸ ಭಾರತದಲ್ಲಿರುವ ಇತರ ಪದ್ಯಗಳನ್ನೂ ಇದರೊಂದಿಗೆ ಸೇರಿಸಿಕೊಂಡು 'ಗಮಕ ಸಂವಾದ' ಕಾರ್ಯಕ್ರಮವನ್ನು ನೀಡಿರಿ.

೪) ಈ ಪದ್ಯ ಭಾಗದ **ಎರಡನೆಯ ಪದ್ಯ**ವನ್ನು ಕಂಠಪಾಠ ಮಾಡಿರಿ.

**ಎಲ್ಲ ಹವ್ಯಾಸಗಳಿಗಿಂತ ವ್ಯಾಸಂಗದ ಹವ್ಯಾಸವೇ ಶ್ರೇಷ್ಠವಾದುದು – ಎಡಿಸನ್.**

## ಅಲಂಕಾರ

**ರೂಪಕಾಲಂಕಾರ:** 'ನಿಟ್ಟೋಟದಲಿ ಹಾಯ್ದನು ಬಿಟ್ಟ ಮಂಡೆಯಲಿ' ಈ ಪದ್ಯದಲ್ಲಿ ಸೇನಾಸಾಗರವೆಂಬ ಪದವನ್ನು ಓದಿದ್ದೀರಿ. ಇದರ ಅರ್ಥ ಸೇನೆಯೇ ಸಾಗರವಾಗಿದೆ ಎಂದು. ಇಲ್ಲಿ ಸೇನೆಗೂ ಸಾಗರಕ್ಕೂ ವ್ಯತ್ಯಾಸವೇ ಇಲ್ಲ. ಎರಡೂ ಒಂದೇ. ಹಾಗೆಯೇ ಮುಖಚಂದ್ರ ಎಂಬ ಪದ. ಮುಖವೇ ಚಂದ್ರ ಆಗಿದೆ. ಎರಡಕ್ಕೂ ಭಿನ್ನತೆ ಇಲ್ಲ. ಹೀಗೆ ಉಪಮಾನ ಉಪಮೇಯಗಳಿಗೆ ಭೇದವಿಲ್ಲದಂತೆ ಹೇಳುವುದೇ ರೂಪಕಾಲಂಕಾರ. ಸಾಗರದಂತೆ ಸೇನೆ, ಚಂದ್ರನಂತೆ ಮುಖ ಎಂದಿದ್ದರೆ ಅದು ಉಪಮಾಲಂಕಾರ. ಸೇನಾಸಾಗರ, ಮುಖಚಂದ್ರ ಎಂದಿದ್ದರೆ ಅದು ರೂಪಕಾಲಂಕಾರ.

## ಛಂದಸ್ಸು

ಸಾಹಿತ್ಯದಲ್ಲಿ ಗದ್ಯ ಪದ್ಯ ಎಂದೆರಡು ಪ್ರಕಾರ ಇದೆ. ಸ್ಥೂಲವಾಗಿ ಹೇಳುವುದಾದರೆ. ಪದ್ಯವು ಬೇರೆಯಾಗುವುದೇ ಛಂದಸ್ಸಿನಿಂದ. ಜೊತೆಯಲ್ಲಿ ಪ್ರಾಸ, ಲಯ, ಸಾಲುಗಳೂ ಪದ್ಯದ ಸ್ವರೂಪವನ್ನು ನಿರ್ಧರಿಸುತ್ತವೆ. ಆಧುನಿಕ ಪದ್ಯಗಳಲ್ಲಿ ಅದಾವುದೂ ಇರಬೇಕಿಲ್ಲ– ಅದರಲ್ಲಿ ಲಯವೇ ಮುಖ್ಯ. ಅದು ಮುಕ್ತ ಛಂದಸ್ಸೆಂದು ಕರೆಯಿಸಿಕೊಳ್ಳುತ್ತದೆ.

ಮಾತ್ರೆ, ಗಣ, ಪದ್ಯದ ಸಾಲುಗಳೇ ಛಂದಸ್ಸಿಗೆ ನಿರ್ಣಾಯಕ.

ಮಾತ್ರೆ ಎಂದರೆ ಒಂದು ಹ್ರಸ್ವ ಅಕ್ಷರದ ಉಚ್ಚಾರಕ್ಕೆ ಬೇಕಾದ ಕಾಲ.

ಇದರಲ್ಲಿ ಒಂದು ಮಾತ್ರೆಯ ಕಾಲಾವಧಿ **ಲಘು**, ಅದರ ಚಿಹ್ನೆ U

**ಗುರು**ವಿನ ಕಾಲಾವಧಿ ಎರಡು ಮಾತ್ರೆ. ಅದನ್ನು ಗುರುತಿಸುವುದು '–' ಈ ಚಿಹ್ನೆಯ ಮೂಲಕ.

ಎಲ್ಲಾ ದೀರ್ಘ ಸ್ವರ ಮತ್ತು ದೀರ್ಘಸ್ವರಸಹಿತವಾದ ವ್ಯಂಜನಗಳು **ಗುರು**ವಾಗುತ್ತದೆ.

ಉದಾ : ಆಗ (– U), ಕೀಳು (– U), ಐರಾವತ (– – U U).

ಮತ್ತೆ (– U), ಕಟ್ಟೆಚ್ಚರ (– – U U) ಇಂತಹ ಒತ್ತಕ್ಷರದ ಹಿಂದಿನ ಅಕ್ಷರವು **ಗುರು**ವಾಗುತ್ತದೆ.

ಅಂತ (– U), ಅಂತಃಪುರ (– – U U) ಇಂತಹ ಅನುಸ್ವಾರ ಮತ್ತು ವಿಸರ್ಗ ಸಹಿತವಾದ ಅಕ್ಷರಗಳೂ **ಗುರು**ವಾಗುತ್ತದೆ.

ಕೇವಲ ವ್ಯಂಜನಾಕ್ಷರದ ಹಿಂದಿನ ಅಕ್ಷರವೂ **ಗುರು**. ಕಾಲೊಳ್ (– –)

ಇಷ್ಟನ್ನು ಬಿಟ್ಟು ಉಳಿದ ಕಡೆಗಳಲ್ಲಿ ಅಕ್ಷರಗಳು ಲಘುವಾಗುತ್ತದೆ. ಅರಸ (U U U) ಕಡೆಗೆ (U U U)...

**ಕೈಕೆಸರಾದರೆ ಬಾಯಿ ಮೊಸರು – ಗಾದೆ.**

ಗಣ ಎಂದರೆ ಗುಂಪು. ಪದ್ಯದಲ್ಲಿ ಮಾತ್ರೆಗಳ ಗುಂಪು. ಕನ್ನಡ ಕಾವ್ಯದಲ್ಲಿ ಮಾತ್ರಾಗಣ, ಅಕ್ಷರಗಣ, ಅಂಶಗಣವೆಂಬ ಮೂರು ವಿಧಗಳಿವೆ.

**ಮಾತ್ರಾಗಣ:** ಅಕ್ಷರಗಳು ಎಷ್ಟೇ ಇರಲಿ, ನಿರ್ದಿಷ್ಟ ಸಂಖ್ಯೆಯ ಮಾತ್ರೆಗಳ ಲೆಕ್ಕಾಚಾರವೇ ಇಲ್ಲಿ ಪ್ರಧಾನ. ಉದಾ: ನಾಲ್ಕು ಮಾತ್ರೆಯ ಗಣವು 'ಮನದಲಿ' (U U UU), 'ಮಾಸಿಕ' (— UU), 'ನಿನ್ನೊಳ್' (— —) ಹೀಗೆ ಮೂರು ರೀತಿಯಲ್ಲಿ ಬರಬಹುದು. ಕಂದ, ಷಟ್ಪದಿ, ರಗಳೆಗಳು ಮಾತ್ರಾಗಣದವುಗಳಾಗಿವೆ. ಇವೆಲ್ಲದರಲ್ಲೂ ಮಾತ್ರಾಸಂಖ್ಯೆ, ಗಣವಿಂಗಡನೆ ಬೇರೆ ಬೇರೆ ರೀತಿಯಲ್ಲಿವೆ.

**ಷಟ್ಪದಿ:** ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಕ ಎಂಬ ಆರು ಪ್ರಮುಖ ವಿಧಗಳಿವೆ. ಹೆಸರೇ ಹೇಳುವಂತೆ ಪ್ರತಿಯೊಂದು ಪದ್ಯಕ್ಕೂ ಆರುಸಾಲುಗಳಿವೆ. ಮೊದಲೆರಡು ಸಾಲುಗಳಲ್ಲಿ ಮಾತ್ರೆ–ಗಣಗಳ ಸಂಖ್ಯೆ ಒಂದೇ ಆಗಿದ್ದು ಮೂರನೆಯ ಸಾಲು ಮೊದಲ ಸಾಲಿನ ಒಂದೂವರೆಯಷ್ಟನ್ನೂ ಅದರ ಮುಂದೆ ಒಂದು ಗುರುವನ್ನೂ ಹೊಂದಿರುತ್ತದೆ. ಪೂರ್ವಾರ್ಧದ ಮೂರು ಸಾಲಿನಂತೆ ಉತ್ತರಾರ್ಧವೂ ಇರುತ್ತದೆ. ಪದ್ಯಾರ್ಧದ ಕೊನೆಯ ಅಕ್ಷರ ಲಘುವಾಗಿದ್ದರೂ ಗುರುವೆಂದು ಭಾವಿಸಬೇಕು. ಇದು ಎಲ್ಲಾ ಷಟ್ಪದಿಗಳಿಗೆ ಅನ್ವಯಿಸುವ ಸಾಮಾನ್ಯ ನಿಯಮ.

ಗುರು ಲಘುಗಳನ್ನು ಗುರುತಿಸಿ ಗಣ ವಿಂಗಡಿಸುವುದನ್ನು 'ಪ್ರಸ್ತಾರ' ಎಂದೆನ್ನುತ್ತಾರೆ.

**ಉದಾ:** ಭಾಮಿನಿ ಷಟ್ಪದಿಯ ಲಕ್ಷಣವನ್ನು ಗಮನಿಸಿ

| — U | — UU | UUU | UUUU |
|---|---|---|---|
| ಎಂದೊ | ಡರ್ಜುನ | ನಗುತ | ರಥವನು |

| — U | — — | UUU | — UU |
|---|---|---|---|
| ಮುಂದೆ | ನಾಲ್ಕೆಂ | ಟಡಿಯ | ನೂಕಲು |

| — U | — — | UUU | UU— | UUU | — UU | — |
|---|---|---|---|---|---|---|
| ಕೊಂದ | ನೀಸಾ | ರಥಿಯೆ | ನುತಸಂ | ವರಿಸಿ | ಮುಂಜೆರ | ಗ |

ಮೊದಲೆರಡು ಸಾಲಲ್ಲಿ ಮೂರು ಮಾತ್ರೆಯ ಗಣದ ಮುಂದೆ ನಾಲ್ಕು ಮಾತ್ರೆಯ ಗಣಗಳು ಎರಡು ಬಾರಿಯೂ, ಮೂರನೆಯ ಸಾಲಿನಲ್ಲಿ ಮೂರು ಮತ್ತು ನಾಲ್ಕು ಮಾತ್ರೆಯ ಗಣಗಳು ಮೂರು ಬಾರಿಯೂ ಕೊನೆಯಲ್ಲಿ ಒಂದು ಗುರುವು ಇರುತ್ತದೆ. ಹೀಗೆಯೇ ಮುಂದಿನ ಪದ್ಯಾರ್ಧದಲ್ಲೂ ಇರುತ್ತದೆ.



**ಕಾಯಕವೇ ಕೈಲಾಸ – ಬಸವಣ್ಣ.**

## ಪೂರಕ ಓದು

# ೧. ಜೋಯಿಸರ ಕುರ್ಚಿ (ಕಥೆ)

*–ಬೆಳಗೋಡು ರಮೇಶ ಭಟ್*

ಎರಡೋ ಮೂರೋ ತಲೆಮಾರುಗಳಷ್ಟು ಹಳೆಯ ಕುರ್ಚಿಯಲ್ಲಿ ಕುಳಿತು ಜೋಯಿಸರು ಒಂದು ಮಾತು ಹೇಳಿದರೆಂದರೆ ಕುಂದಾಪುರದಿಂದ ಶೃಂಗೇರಿಯವರೆಗಿನ ಆಸ್ತಿಕರಿಗೆಲ್ಲ ಅದೊಂದು ವೇದವಾಕ್ಯವೇ. ಅದಕ್ಕೆ ಕಾರಣ ಸ್ಥಳಪುರಾಣ ಇದ್ದೀತು, ಅವರ ಅಜ್ಜನ ತಪಸ್ಸಿನ ಫಲ ಇದ್ದೀತು, ಅವರ ವಿದ್ವತ್ತಿನ ಫಲಶ್ರುತಿಯಿದ್ದೀತು. ಒಂದು ಹೆಚ್ಚಿಲ್ಲ, ಒಂದು ಕಮ್ಮಿಯಿಲ್ಲ. ಅಂತಹ ತೂಕದ ಮಾತು. ಆ ಕಾರಣಕ್ಕಾಗಿಯೇ ಜೋಯಿಸರಿಗೆ ಸಲ್ಲುತ್ತಿದ್ದ ಗೌರವದ ಒಂದಿಷ್ಟು ಪಾಲು ಆ ಕುರ್ಚಿಗೂ ಸಲ್ಲುತ್ತಿತ್ತು. ಮಲೆನಾಡಿನ ಒಂದಿಷ್ಟು ಮಂದಿಯಂತೂ, ಜೋಯಿಸರೇ ಎದುರು ಸಿಕ್ಕಿದರೂ, 'ಒಂದೆರಡು ಮಾತನಾಡಲಿಕ್ಕಿತ್ತು. ನಾಳೆ ಮನೆಯಲ್ಲಿರುತ್ತೀರಲ್ಲ, ಅಲ್ಲೇ ಬರುತ್ತೇವೆ' ಎಂದು ನಿಶ್ಚಯ ಮಾಡಿಕೊಂಡು ಮಾತನಾಡಲಿಕ್ಕೆ ಹೋಗುತ್ತಿದ್ದರು. ಯಾಕೆಂದರೆ ಅವರಿಗೆ ಆ ಹಳೆಯ ಕುರ್ಚಿಯ ಮೇಲೆ ಕುಳಿತ ಜೋಯಿಸರಷ್ಟೇ ಸಮಾಧಾನ ಕೊಡುವವರು.

ನಿಜಕ್ಕೂ ಹೇಳಬೇಕೆಂದರೆ ಬೇರೆಲ್ಲರಿಗಿಂತ ಜೋಯಿಸರ ಹೆಂಡತಿಗೆ ಆ ಕುರ್ಚಿಯ ಮೇಲೆ ಅಷ್ಟೊಂದು ನಂಬಿಕೆ. ಜೋಯಿಸರಿಂದ ನಿಮಿತ್ಯ ಕೇಳಿ ಹೋದವರೋ, ಜಾತಕ ತೋರಿಸಿದವರೋ ನಾಲ್ಕು ಒಳ್ಳೆಯ ಮಾತು ಹೇಳಿದರೆ, 'ಅದೆಲ್ಲ ಹಿರಿಯರ ಪುಣ್ಯ' ಎಂದು ಹೇಳಿ ಮನಸ್ಸಿನಲ್ಲಿಯೇ ಆ ಕುರ್ಚಿಗೆ ನಮಸ್ಕರಿಸುವ ಮಹಾತಾಯಿ ಅವರು. ಬೇರೆಯವರೇನು ಬಂತು, ಸ್ವತಃ ಜೋಯಿಸರ ಶಿಷ್ಯರೇ, ಜೋಯಿಸರು ಇಲ್ಲದ ಹೊತ್ತಿನಲ್ಲಿ ಆ ಕುರ್ಚಿಯಲ್ಲಿ ಕುಳಿತರೆ ಅವರು ಕೋಪೋದ್ರಿಕ್ತರಾಗಿ ಎಬ್ಬಿಸಿಬಿಡುತ್ತಿದ್ದುದು ಎಲ್ಲರಿಗೂ ತಿಳಿದ ಸಂಗತಿಯೇ. ಜೋಯಿಸರ ಕುರ್ಚಿಯ ಬಗ್ಗೆ ಆ ತಾಯಿಯ ಕಠಿಣವಾದ ನಿಲುವಿಗೆ ಒಂದಿಷ್ಟು ವಿನಾಯಿತಿ ಏನಾದರೂ ಇದ್ದೀತೆಂದರೆ ಅದು ನನಗೆ ಮಾತ್ರ. ಆರು ತಿಂಗಳಿಗೋ, ವರ್ಷಕ್ಕೋ ಒಮ್ಮೆ ಬರುವ ಅಪರೂಪದ ಅತಿಥಿ ನಾನೆಂಬುದಕ್ಕಿಂತ ಆಕೆಯ ಒಡಹುಟ್ಟಿದ ತಮ್ಮನೆಂಬ ಕಾರಣಕ್ಕೆ ಈ ವಿನಾಯಿತಿ ಎನ್ನುವುದು ನನಗೂ ಗೊತ್ತು ; ಗುಟ್ಟಿನಲ್ಲಿ ಜೋಯಿಸರಿಗೂ ಗೊತ್ತು.

ಅಪರೂಪದ ಅತಿಥಿ ಎಂದೆನಷ್ಟೆ? ಹಾಗೆ ಅಪರೂಪಕ್ಕೆ ಬಂದಾಗ ಮನೆಯಲ್ಲಿ ಜೋಯಿಸರಿಲ್ಲ ಎಂದಾದರೆ ನಾಲ್ಕುಕ್ಷಣ ನಾನೂ ಆ ಕುರ್ಚಿಯಲ್ಲಿ ಕುಳಿತುಬಿಡುತ್ತಿದ್ದೆ. ಹಾಗೆ ನಾನು ಕೂತದ್ದು ಗೊತ್ತಾಗುತ್ತಲೇ ಅಕ್ಕ ಅಡಿಗೆ ಮನೆಯಿಂದಲೇ ಕೂಗುತ್ತಿದ್ದಳು, 'ಒಕ್ಕುಂಟಿ ಹಾಗೆ ಅಲ್ಲಿ ಕೂತು ಏನು ಮಾಡುತ್ತಿ, ಇಲ್ಲಿ ಬಾ. ನಿನ್ನ ಹತ್ತಿರ ಮಾತಾಡಲಿಕ್ಕಿದೆ.' ಎಂತಲೋ, 'ಚಾ ತಿಂಡಿ ಏನಾದರೂ ಬೇಕಿದ್ದರೆ ಇಲ್ಲೇ ಬರಬೇಕು. ಅಲ್ಲಿಗಂತೂ ಖಂಡಿತ ತಂದುಕೊಡುವುದಿಲ್ಲ' ಎಂದು. ಹಾಗೆ ಕರೆದಾಗಲೆಲ್ಲ ಎಷ್ಟೋ ಸಲ ಎದ್ದು ಹೋಗುವುದು ಅನಿವಾರ್ಯವೇ ಆಗುತ್ತಿತ್ತು.

ಒಂದೆರಡು ಸಲ ಹೀಗೆ ಜೋಯಿಸರ ಕುರ್ಚಿಯಲ್ಲಿ ಕುಳಿತುಕೊಳ್ಳುವ ಅವಕಾಶ ಸಿಕ್ಕಿದಾಗಲೇ ಮಲೆನಾಡಿನ ಕಡೆಯ ಕೆಲವರಿಗೆ ನಿಮಿತ್ಯ ಹೇಳುವ ಅವಕಾಶ ಕೂಡ ನನಗೆ ಸಿಕ್ಕಿತ್ತು. ನನ್ನ ಮಾತುಗಳೆಂದರೆ ಒಂದು ರೀತಿಯ ಕೌನ್ಸಿಲಿಂಗ್ ಅಷ್ಟೇ. ನನ್ನ ಮಾತುಗಳನ್ನು ಕೇಳಿದ ಕೆಲವರು ಜೋಯಿಸರಲ್ಲಿ 'ನಿಮ್ಮ ಭಾವನಂಟ



**ಶಿಷ್ಯನಿಂದ ಸೋಲನ್ನು ಬಯಸುವವನೇ ನಿಜವಾದ ಗುರು – ಆರ್ಯೋಕ್ತಿ.**

ಪರವಾಗಿಲ್ಲ ಮಾರಾಯರೆ' ಎಂದಿದ್ದರಾದರೂ, ಅಕ್ಕ ಮಾತ್ರ 'ಆ ಕುರ್ಚಿಯ ಮರ್ಯಾದೆ ತೆಗೆಯಬೇಡ ಮಾರಾಯ' ಎನ್ನುತ್ತಿದ್ದಳು.

ಅಂತಹದೊಂದು ದಿನ, ಹೊಸನಗರದ ಕಡೆಯ ಹೆಂಗಸರೊಬ್ಬರು ಚಿಕ್ಕ ಮಗುವೊಂದನ್ನು ಎತ್ತಿಕೊಂಡು ಬಂದಿದ್ದರು. ಒಂದು ಕಾಲದಲ್ಲಿ ಸಿರಿವಂತಿಕೆಯಿಂದ ಮೆರೆದು, ಈಗ ಸ್ವಲ್ಪ ನಸೀಬು ಖೋತಾ ಆದವರ ಹಾಗೆ ಕಾಣಿಸುತ್ತಿದ್ದರು. 'ಜೋಯಿಸರಿಲ್ಲ, ಇನ್ನೊಂದು ವಾರ ಬರುವ ಸೂಚನೆಯೂ ಇಲ್ಲ' ಎನ್ನುವುದನ್ನು ಶಿಷ್ಯೋತ್ತಮರು ತಿಳಿಸುತ್ತಲೇ ಅವರು, 'ಅಯ್ಯೋ ದೇವರೇ' ಎಂದು ತಲೆಯ ಮೇಲೆ ಕೈಹೊತ್ತು ಕುಳಿತೇಬಿಟ್ಟರು.

ನನ್ನ ಪುರಾಣ ಆರಂಭಿಸುವ ಮೊದಲೇ ಅಕ್ಕನಿಂದ ಬುಲಾವುಬಂತು. 'ಅವಳ ಹತ್ತಿರ ನೀನೇನು ಮಾತಾಡಲಿಕ್ಕೆ ಹೋಗಬೇಡ, ಮಹಾ ರಾಕ್ಷಸಿ' ಎಂದಳು ಅಕ್ಕ.

'ರಾಕ್ಷಸಿ? ನೋಡಿದರೆ ಹಾಗೆ ಕಾಣಿಸುವುದಿಲ್ಲ' ಎಂದೆ. ಅಕ್ಕ ಕೊಂಚ ಸಿಟ್ಟಿನಿಂದಲೇ 'ಎಲ್ಲದಕ್ಕೂ ತಮಾಷೆ ಮಾಡಬೇಡ. ಅವಳ ಸ್ವಭಾವದ ಕುರಿತು ನಾನು ಹೇಳಿದ್ದು' ಎಂದಳು.

ಆಗಲೇ ಅಕ್ಕನಿಂದ ಈ ಆಗಂತುಕಿಯ ಪ್ರವರ ತಿಳಿಯಿತು. ಘಟ್ಟದ ಮೇಲಿನ ದೊಡ್ಡ ಹೆಗಡೆಯವರೊಬ್ಬರ ಎರಡನೆಯ ಹೆಂಡತಿ ಈಕೆ. ಮೊದಲನೆಯ ಹೆಂಡತಿಯ ಮಗಳೊಬ್ಬಳಿದ್ದು, ಹತ್ತೋ ಹದಿನೈದೋ ವರ್ಷದ ಆ ಹೆಣ್ಮಗುವಿಗೆ ಈಕೆ ನರಕದರ್ಶನ ಮಾಡಿಸುತ್ತಿದ್ದಾಳಂತೆ. ಇವಳ ಗ್ರಹಚಾರಕ್ಕೆ ಈಗ ಅಡಿಕೆ ಬೆಲೆಯೂ ಕುಸಿದು ದಾರಿದ್ರ್ಯವು ಕಿಟಕಿಯಿಂದ ಇಣುಕುತ್ತಿದೆಯಂತೆ. ಹೆಗಡೇರ ಮೊದಲ ಹೆಂಡತಿ ಅನ್ನಪೂರ್ಣೆ. ಈಕೆ 'ರಾಕ್ಷಸಿ', ಇವಳ ಕಾಲ್ಗುಣದಿಂದ ಹೆಗಡೇರ 'ಅಡಿ ಅರೆಯಿತು' ಎಂದೂ ಅಕ್ಕ ಹೇಳಿದಳು.



ನನ್ನ ಬಳಿ ಏನೇ ಹೇಳಲಿ, ಅಕ್ಕ ಆ ಹೆಂಗಸಿನ ಹತ್ತಿರ ಮಾತ್ರ 'ಕಾಲು ತೊಳೆದು ಬನ್ನಿ, ಮಧ್ಯಾಹ್ನದ ಹೊತ್ತು. ಒಂದಿಷ್ಟು ಊಟ ಮಾಡಿ, ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು ಹಿಂದೆ ಹೋಗುವಿರಂತೆ. ಅವರಂತೂ ನಿಮಗೆ ಸಿಗುವುದಿಲ್ಲ' ಎಂದು ಉಪಚಾರವನ್ನೇ ಮಾಡಿದಳು. ಒತ್ತಾಯಮಾಡಿ ಹೊಟ್ಟೆತುಂಬ ಉಣಿಸಿಯೂಬಿಟ್ಟಳು.

ಆ ಹೆಂಗಸು ಮಾತ್ರ ಊಟದುದ್ದಕ್ಕೆ ತನ್ನ ಸವತಿಯನ್ನೂ, ಅವಳು ಬಿಟ್ಟು ಹೋದ ದರಿದ್ರದ ಮಗಳನ್ನೂ ಬಾಯಿ ತುಂಬಾ ಶಪಿಸುತ್ತಿದ್ದಳು. ತನ್ನ ಜೊತೆಯಲ್ಲಿ ತಂದಿದ್ದ ಚಿಕ್ಕ ಮಗುವನ್ನು ತೋರಿಸುತ್ತ 'ಈ ದೇವರ ಮರಿಗಾಗಿ ತಾನಿನ್ನೂ ಬದುಕಿದ್ದೇನೆ' ಎಂದೂ ಹೇಳಿದಳು. 'ಜೋಯಿಸರಾದರೂ ದಾರಿ ತೋರಿಸುತ್ತಾರೆಂದು ಬಂದರೆ ಅವರೂ ಸಿಗುತ್ತಿಲ್ಲ' ಎನ್ನುವ ಹೊತ್ತಿಗೆ ಊಟ ಮುಗಿಯಿತು.

ಊಟದ ನಂತರ ಮತ್ತೊಮ್ಮೆ ರೇಷ್ಮೆಯ ಪಂಚೆಯುಟ್ಟು ಜೋಯಿಸರ ಕುರ್ಚಿಯಲ್ಲಿ ಕುಳಿತೆ. ಜೋಯಿಸರ ಚೀಲದಿಂದ ಲೆಕ್ಕ ಮಾಡಿ ಮುವತ್ತೊಂದು ಕವಡೆಗಳನ್ನು ತೆಗೆದಿರಿಸಿದೆ. ಆ ಮೇಲೆ ಆ ಹೆಂಗಸನ್ನು ಕರೆದೆ. 'ಇಲ್ಲಿ ಬನ್ನಿಯಮ್ಮ'. ಅವರು ಹತ್ತಿರ ಬಂದು ವಿನಯದಿಂದ ನಿಂತರು.

**ಗುರಿಯಂತೆ ಗುರಿ ಸೇರುವ ಮಾರ್ಗವೂ ಶ್ರೇಷ್ಠವಾಗಿರಬೇಕು – ಡಾ। ಕಾರಂತ.**

‘ಈ ಕವಡೆಗಳನ್ನು ಸರಿಯಾಗಿ ಎರಡು ಪಾಲು ಮಾಡಿ’

‘ಆಯಿತು. ಒಂದು ಉಳಿಯಿತು’

‘ಪುನಃ ಈ ಕವಡೆಗಳನ್ನು ಮೂರು ಪಾಲು ಮಾಡಿ’.

‘ಆಯಿತು. ಈಗಲೂ ಒಂದು ಉಳಿಯಿತು’.

‘ಪುನಃ ಈ ಕವಡೆಗಳನ್ನು ಸರಿಯಾಗಿ ನಾಲ್ಕು ಪಾಲು ಮಾಡಿ’.

‘ಆಯಿತು, ಈಗ ಒಂದು ಕಡಮೆಯಾಗಿದೆ’.

‘ನೋಡಿಯಮ್ಮ, ಸತ್ಯ ಇಷ್ಟೆ. ನಿಮ್ಮ ಮನೆಯ ಬಾಗಿಲಲ್ಲಿ ಒಂದು ಅತೃಪ್ತ ಆತ್ಮ ಕುಳಿತಿದೆ....’ ನನ್ನ ಮಾತು ಮುಗಿಯುವ ಮೊದಲೇ ಆ ಹೆಂಗಸು ಉನ್ಮತ್ತಳಂತೆ ಕೂಗಿದಳು. ‘ನನಗೆ ಮೊದಲೇ ಗೊತ್ತು. ಆ ಪರದೇಶಿ ಸತ್ತರೂ ನಮ್ಮನ್ನು ಬಿಡುವುದಿಲ್ಲ. ನಮಗೆ ನೆಮ್ಮದಿ ಸಿಗಲೇಬಾರದೆಂದು ಅದೊಂದು ಶನಿಯೂ ಸಾಟಿಯಾಗಿದೆ.’

ಕವಡೆಗಳನ್ನು ಸರಿಯಾಗಿ ಐದು ಪಾಲು ಮಾಡಿದೆ. ಒಂದು ಜಾಸ್ತಿ ಉಳಿಯಿತು. ಅದನ್ನೆತ್ತಿ ಅವಳ ಮುಂದಿಟ್ಟು ಮಾತು ಮುಂದುವರೆಸಿದೆ.

‘ಅಮ್ಮ, ನಾನು ಹೇಳುವುದನ್ನು ನಿಧಾನವಾಗಿ ಅರ್ಥಮಾಡಿಕೊಳ್ಳಿ. ನಿಮ್ಮ ಮನೆಯ ಬಾಗಿಲಲ್ಲಿ ಕುಳಿತಿರುವ ಆ ಆತ್ಮ ನಿಮ್ಮ ರಕ್ಷಣೆಗಾಗಿ ಕೂತಿದೆ. ನೀವು ಮನಸ್ಸು ಮಾಡಿದರೆ ನಿಮಗದರಿಂದ ಲಾಭವಿದೆ. ಈ ಒಂಟಿ ಕವಡೆ ಹೇಳುತ್ತಿದೆ, ನೀವು ನಿಮ್ಮ ಮನೆಯಲ್ಲಿ ಬಿಟ್ಟು ಬಂದಿರುವ, ಅಳುತ್ತ ಕುಳಿತಿರುವ ಒಂದು ಹೆಣ್ಣು ಮಗುವಿನ ಕೈಯಲ್ಲಿ ನಿಮ್ಮ ಮನೆಯ, ನಿಮ್ಮ ಈ ಮಗುವಿನ ಮತ್ತು ನಿಮ್ಮೆಲ್ಲರ ಸುಖ-ದುಃಖಗಳ ಕಡಿವಾಣವಿದೆ. ಇವತ್ತಿನಿಂದ ಆ ಮಗುವಿಗೆ ನೀವು ಎಷ್ಟು ಸಂತೋಷ ಕೊಡುತ್ತೀರೋ, ಅದರ ಮೂರು ಪಟ್ಟು, ನಾಲ್ಕು ಪಟ್ಟು ಸುಖ, ಸಂತೋಷ, ಸಂಪತ್ತು, ಸಮೃದ್ಧಿ ನಿಮಗೆ ಸಿಗುತ್ತೆ.’

‘ನೀವು ನಿಜ ಹೇಳುತ್ತೀರಾ?’ ಎಂದಳಾಕೆ.

ನನ್ನೆದುರಿಗಿದ್ದ ಎಲ್ಲ ಕವಡೆಗಳನ್ನು ಸರಿಯಾಗಿ ಆರುಪಾಲು ಮಾಡಿದೆ. ಒಂದು ಜಾಸ್ತಿ ಉಳಿಯಿತು. ಅದನ್ನೂ ಅವಳೆದುರು ತಳ್ಳಿ ಹೇಳಿದೆ.

‘ನೋಡಮ್ಮ, ಇದು ಸಾಕ್ಷಿ. ನನಗೆ ನಿಮ್ಮ ಪರಿಚಯವಿಲ್ಲ. ನಿಮ್ಮ ಹಿಂದು ಮುಂದು ಗೊತ್ತಿಲ್ಲ. ಜೋಯಿಸರ ಈ ಕುರ್ಚಿಯ ಮೇಲೆ ಕುಳಿತಾಗ ಮಾತ್ರ ಕೇಳಿಸುವ, ಈ ಕವಡೆಗಳು ಹೇಳಿದ ಸತ್ಯ ನಿಮಗೆ ಹೇಳಿದ್ದೇನೆ. ನಿಮಗೆ ಸಂತೋಷ ಬೇಕು ಅಂತಿದ್ದರೆ, ನಿಮ್ಮ ಮಗುವಿಗೆ ಸುಖ ಬೇಕು ಅಂತಿದ್ದರೆ, ಆ ಖಜಾನೆಯ ಕೀಲಿಕೈಯೇ ನಿಮ್ಮ ಮನೆಯಲ್ಲಿ ದುಃಖಿಯಾಗಿ ಕುಳಿತಿರುವ ಆ ಹೆಣ್ಣುಮಗು. ಅದನ್ನು ಸಂತೋಷದಲ್ಲಿ ಇಡಿ. ಅದಕ್ಕೆ ಸಲ್ಲಬೇಕಾದುದನ್ನು ಕೊಡಿ. ನಿಮ್ಮ ಪಾಲಿಗೆ ಸಲ್ಲಬೇಕಾದುದನ್ನು ನೀವು ನಂಬಿದ ದೇವರು ಕೊಡುತ್ತಾನೆ.’

**ದಕ್ಷತೆಯು ವ್ಯಕ್ತಿಯನ್ನು ಎತ್ತರಕ್ಕೇರಿಸುತ್ತದೆ**

ಆ ಹೆಂಗಸು ಯಾವ ಮಾತನ್ನೂ ಆಡದೆ ಸುಮಾರು ಅರ್ಧ ಗಂಟೆ ಹಾಗೆಯೇ ಕುಳಿತಿದ್ದಳು. ಅಕ್ಕನ ಕಾಲಿಗೆ ನಮಸ್ಕಾರ ಮಾಡಿ 'ಹೋಗಿಬರುತ್ತೇನಮ್ಮ' ಎಂದಳು. ನನ್ನಲ್ಲಿ ಯಾವ ಮಾತನ್ನೂ ಆಡಲಿಲ್ಲ. ಮಗುವನ್ನು ಜೋಯಿಸರ ಕುರ್ಚಿಯ ಎದುರು ತಂದು ಸಾಷ್ಟಾಂಗ ನಮಸ್ಕಾರ ಮಾಡಿಸಿದಳು. 'ಬಸ್ಸಿಗೆ ತಡವಾಯಿತೋ ಏನೋ' ಎಂದು ತನ್ನಷ್ಟಕ್ಕೆ ಎಂಬ ಹಾಗೆ ಮಾತಾಡಿ, ಮಗುವನ್ನೆತ್ತಿಕೊಂಡು, 'ಬರುತ್ತೇನಮ್ಮ' ಎಂದು ಅಕ್ಕನಿಗೆ ಮತ್ತೊಮ್ಮೆ ಹೇಳಿ ಅವಸರದಲ್ಲಿ ನಡೆದು ಹೋದಳು.

****

ಈ ಘಟನೆ ನಡೆದ ಕೆಲವೇ ದಿವಸಗಳಲ್ಲಿ ಹೊಟ್ಟೆಪಾಡಿಗೆಂದು ದೇಶಾಂತರ ಹೋದವನು, ಸುಮಾರು ಹನ್ನೆರಡು ವರ್ಷಗಳ ನಂತರ ಅಕ್ಕನ ಮಗಳ ಮದುವೆಗೆಂದು ಊರಿಗೆ ಬಂದಾಗ ಮತ್ತೊಂದು ಘಟನೆ ನಡೆಯಿತು.

ಕಲ್ಯಾಣ ಮಂಟಪದಲ್ಲಿ ಕೈತುಂಬ ಕೆಲಸವಿರುವವರೇ ಆಚೀಚೆ ಓಡಾಡುತ್ತಿರುವಾಗ, ಬರಿಗೈಯ ನನಗೆ ಇಲ್ಲೇನು ಕೆಲಸವೆಂದುಕೊಂಡು ಬಾಗಿಲ ಹತ್ತಿರ ಫ್ಯಾನಿನ ಕೆಳಗೆ ಕುರ್ಚಿ ಹಾಕಿಕೊಂಡು ಕುಳಿತಿದ್ದೆ. ಆ ಹೊತ್ತಿಗೆ ತುಂಬು ಗರ್ಭಿಣಿಯೊಬ್ಬಳನ್ನು ಜೊತೆಗೆ ಕರೆತಂದ ಅಕ್ಕ, 'ಅಲ್ಲಿದ್ದಾನೆ ನೋಡು', ಎಂದು ನನ್ನನ್ನು ತೋರಿಸಿ ಮತ್ತೆ ರಂಗಸ್ಥಳದ ಕಡೆಗೆ ಧಾವಿಸಿದಳು. ಆ ಹೆಣ್ಣುಮಗಳು ತೀರಾ ಹತ್ತಿರ ಬಂದು 'ನನ್ನ ಗುರುತಿದೆಯಾ?' ಎಂದಳು.

ಸಾಕ್ಷಾತ್ ಲಕ್ಷ್ಮಿಯೇ. ಅಷ್ಟು ರೂಪವತಿ. ತುಂಬು ಗರ್ಭಿಣಿ ಬೇರೆ. ಮೈತುಂಬ ಚಿನ್ನದ ರಾಶಿ. ಅವಳ ಮುಂದೆ ಪೂರ್ಣ ನಿರ್ಗತಿಕನಂತಿರುವ ನನ್ನೆದುರು ನಿಂತಿದ್ದಾಳೆ. ಕಷ್ಟಪಟ್ಟು ಬಗ್ಗಿ ನನ್ನ ಕಾಲುಗಳಿಗೆ ನಮಸ್ಕಾರ ಮಾಡಿದ್ದಾಳೆ.

"ಯಾರಮ್ಮ ನೀನು?" ಎಂದೆ.

ಗದ್ಗದ ಕಂಠದಿಂದ ಆಕೆ ನುಡಿದಳು. "ನೀವು ನನ್ನನ್ನು ಕಂಡಿರಲಿಲ್ಲ. ಆದರೆ ನನ್ನ ಪಾಲಿನ ದೇವರು ನೀವು. ನನ್ನನ್ನು ಕಿತ್ತುತಿನ್ನುತ್ತಿದ್ದ ನನ್ನ ಕಿರಿಯಬ್ಬೆಗೆ ನೀವೊಮ್ಮೆ ನಿಮಿತ್ತ ಹೇಳಿದಿರಂತೆ. ನಿಮ್ಮ ಮಾತು ಕೇಳಿಬಂದ ದಿವಸದಿಂದ ಅವರು ನನ್ನನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗುವಿಗಿಂತ ಹೆಚ್ಚಾಗಿ ನೋಡಿಕೊಂಡರು. ನನ್ನ ಅದೃಷ್ಟವೋ ಅಥವಾ ನಿಮ್ಮ ಆಶೀರ್ವಾದವೋ, ಆ ನಂತರದ ದಿವಸಗಳಲ್ಲಿ ನನ್ನ ತಂದೆ ಮುಟ್ಟಿದ್ದೆಲ್ಲ ಚಿನ್ನವಾಯಿತು. ಬೆಳೆದುದಕ್ಕೆ ಬೆಲೆ ಬಂತು. ಬಂದ ಭಾಗ್ಯಕ್ಕೆ ನಾನೇ ಕಾರಣ ಎಂದು ಅವರೆಲ್ಲ ತಿಳಿದರು. ಸಾವು ಬರಬಾರದೇ, ಸತ್ತ ಅಮ್ಮ ನನ್ನನ್ನು ಕೊಂಡೊಯ್ಯಬಾರದೇ ಎಂದು ಪ್ರತಿದಿನ ಕಣ್ಣೀರು ಕರೆಯುತ್ತಿದ್ದ ನಾನು ಮತ್ತೆ ಯಾವತ್ತೂ ಕಣ್ಣೀರಿಡದ ಹಾಗೆ ನೀವು ಮಾಡಿಬಿಟ್ಟಿರಿ.

ನನ್ನ ಮದುವೆ ನಿಶ್ಚಯವಾದ ಮೇಲೆ ನಿಮ್ಮನ್ನು ಹುಡುಕಿಕೊಂಡು ಜೋಯಿಸರ ಮನೆಗೆ ಬಂದಿದ್ದೆ. ನಿಮ್ಮ ಅಕ್ಕ ನನಗೆ ಲಭಿಸಿದ ಭಾಗ್ಯವೆಲ್ಲ ನನ್ನ ಅಮ್ಮನ ಪುಣ್ಯದ ಫಲ ಎಂದರು. ನಿಮ್ಮ ಬಗ್ಗೆ ಕೇಳಿದರೆ,

‘ಅವನಿಗೆ ನಿಮಿತ್ಯ, ಭವಿಷ್ಯ ಏನೂ ಗೊತ್ತಿಲ್ಲ. ಜೋಯಿಸರ ಕುರ್ಚಿಯಲ್ಲಿ ಕುಳಿತು ಸುಳ್ಳು ಹೇಳಿ ನಿನ್ನ ಕಿರಿಯಬ್ಬೆಯನ್ನು ಮಂಗ ಮಾಡಿಬಿಟ್ಟ’ ಎಂದರು. ಆದರೆ ನನಗೆ ಮಾತ್ರ ನಂಬಿಕೆ ಬರುತ್ತಿಲ್ಲ. ನನ್ನ ಪಾಲಿನ ದೇವರು ನೀವು”.

ಮುಂದುವರಿಸಿ ಆಕೆ ಅಳುತ್ತ ಹೇಳಿದಳು “ನಾನು ಅಳದೇ ಹತ್ತಿರ ಹತ್ತಿರ ಹನ್ನೆರಡು ವರ್ಷಗಳೇ ಆಗಿಬಿಟ್ಟಿವೆ”.

ಇದನ್ನೆಲ್ಲ ಕುತೂಹಲದಿಂದ ಕಾಣುತ್ತ ನಿಂತ ನನ್ನ ಮಗಳನ್ನು ಹತ್ತಿರ ಕರೆದು ಅಪ್ಪಿಕೊಂಡು “ನಿಮ್ಮ ಮಗಳೇ ಅಲ್ಲವೇ?” ಎಂದಳು.

ಮತ್ತೆ ಮೂವತ್ತೂ ದಾಟದ ಆ ಹೆಣ್ಣು ಮಗಳು, ಮುದುಕಿಯರ ಹಾಗೆ ನನ್ನ ಮಗಳ ತಲೆಯ ಮೇಲೆ ತನ್ನೆರಡು ಕೈಗಳನ್ನಿಟ್ಟು “ನಿನ್ನ ತಂದೆಯ ಸತ್ಯ ನಿನ್ನನ್ನು ಕಾಪಾಡಲಿ” ಎಂದು ಹರಸಿದಳು. ಈಕೆಯೇನಾದರೂ ತಮಾಷೆ ಮಾಡುತ್ತಿದ್ದಾಳೆಯೋ ಎಂದು ನೋಡಿದರೆ, ಆಕೆಯ ಕಣ್ಣಾಲಿಗಳೆರಡೂ ಕಂಬನಿಯ ಕೊಳದಲ್ಲಿ ಮುಳುಗಿಹೋಗಿವೆ.

## ಅಭ್ಯಾಸ

1. ಯಾವಾಗ ಜೋಯಿಸರ ಮಾತು ವೇದವಾಕ್ಯವಾಗುತ್ತಿತ್ತು?
2. ಕುರ್ಚಿಯ ಬಗ್ಗೆ ಜೋಯಿಸರ ಹೆಂಡತಿಗೆ ಇರುವ ಭಾವನಾತ್ಮಕ ಸಂಬಂಧ ಎಂತಹದು?
3. ಹೆಗಡೆಯವರ ಹೆಂಡತಿ ಅನ್ನಪೂರ್ಣೆ ಕೆಟ್ಟವಳು ಎನಿಸಿದ್ದು ಏಕೆ?
4. ಲೇಖಕರು ಅನ್ನಪೂರ್ಣೆಗೆ ಹೇಳಿದ ಮಾತು ಕೇವಲ ಕೌನ್ಸಿಲಿಂಗ್ ಆಗಿತ್ತು. ಹೇಗೆ?
5. ‘ನನ್ನ ಪಾಲಿನ ದೇವರು ನೀವು’ ಎಂದು ಅಪರಿಚಿತ ಹೆಣ್ಣೊಬ್ಬಳು ಲೇಖಕರಿಗೆ ನಮಸ್ಕರಿಸಿದ್ದೇಕೆ?
6. ಜೋಯಿಸರ ಕುರ್ಚಿ ನಿಜವಾಗಿಯೂ ಅಸಾಮಾನ್ಯವೇ?
7. ನಿಮಿತ್ಯ ಹೇಳುವಲ್ಲಿ ಲೇಖಕರ ಜಾಣ್ಮೆಯನ್ನು ಗುರುತಿಸಿ.





**ನಡತೆ ಮತ್ತು ಜ್ಞಾನವು ಹೃದಯದ ಎರಡು ರೆಕ್ಕೆಗಳು – ಬುದ್ಧ**

# ೨. ಒಂದು ದಿನ ಹೀಗಾಯ್ತು (ಕವನ)

–ನಿರ್ಮಲಾ

ಕೈಗೆ ಸಿಕ್ಕಿದೆ ಇಂದು ಅಡಿಗೆಮನೆ ಸಾಮ್ರಾಜ್ಯ
ಹೊಚ್ಚ ಹೊಸ ಮದುಮಗಳು ಸಾವಿತ್ರಿಗೆ
ತೊಗರಿ–ಕಡಲೆಯ ಮಧ್ಯ ವ್ಯತ್ಯಾಸ ಗೊತ್ತಿಲ್ಲ
ಮಾಡಲೇಬೇಕಾಯ್ತು ಅಂದು ಅಡಿಗೆ

ಹಳ್ಳಿಮನೆ, ಅಂಗಳದಿ ಏನೇನೋ ತರಕಾರಿ
ಇವಳು ತಂದಳು ಸೌತೆ ಸುಲಭವೆಂದು
ಪೆನ್ನು, ಹಾಳೆಯ ಜೊತೆಗೆ ಸರಸರನೆ ಓಡಿದಳು
ದೂರವಾಣಿಯ ಬಳಿಗೆ ಕುರ್ಚಿಯೆಳೆದು

ಅತ್ತಕಡೆ ಅವಳಮ್ಮ, ಇತ್ತ ನವ ಮದುಮಗಳು
ಸೌತೆಕಾಯಿ ಸಾಂಬಾರು ನಡುವಿನಲಿ
ಉಪ್ಪೆಷ್ಟು, ಹುಳಿಯೆಷ್ಟು, ಏನೇನು, ಎಷ್ಟೆಷ್ಟು
ಬರೆದುಕೊಂಡಳು ಮಗಳು ಹಾಳೆಯಲಿ

ಸಿದ್ಧವಾಯಿತು ಅಡಿಗೆ, ಒಗ್ಗರಣೆ ಗಮಗಮದಿ
ಗಂಟೆ ಹೇಳಿತು, "ಈಗ ಊಟದ ಕಾಲ"
ಎಲ್ಲ ನೆರೆದರು ಕರೆಗೆ ಓಗೊಟ್ಟು, ಉಣ್ಣಲಿಕೆ
ಶುಚಿಯಾಗಿ ತೊಳೆದಾಯ್ತು ಕೈಯ, ಕಾಲ.

ಹಪ್ಪಳವು, ಸಂಡಿಗೆಯು, ಮತ್ತೆ ಬಿಸಿ ಬಿಸಿಯನ್ನ
ಮೊಸರು, ಸಾಂಬಾರು ಜತೆಗೆ ಕೋಸುಂಬರಿ
"ಪಾಪ, ಹೊಸಬಳು!" ಎಂದು ಬಡಿಸಿಕೊಂಡರು ತಾವೆ
ಎಲ್ಲವನು ಎಲ್ಲರೂ ಒಟ್ಟು ಸೇರಿ



**ಆತ್ಮವಿಶ್ವಾಸ, ನಿಶ್ಚಿತ ಗುರಿ, ಸಂಯಮವು ಇವು ಯಶಸ್ಸಿನ ಮೂರು ಅಂಶಗಳು**

ಹಸಿದಿದ್ದ ಮಾವಯ್ಯ ಮೊದಲು ಸವಿದನು ತುತ್ತ
ನೋಡಿದನು ಕುಳಿತಿದ್ದ ಎಲ್ಲರ ಮೋರೆ
ಅವರ ಕಣ್ಣಲ್ಲಿ ಪ್ರಶ್ನೆ ಓದಿದಳು ಅತ್ತೆಮ್ಮ
ಕಲಸಿ ತಿಂದಳು ಅನ್ನ ತಾನು ಚೂರೇ

"ಮೊಸರು, ಮಜ್ಜಿಗೆಯಿಂದ ಊಟ ಮುಗಿಸಿ ಎಲ್ಲ
ಕಲಸದಿರಿ ಸಾಂಬಾರು" ಎಂದಳತ್ತೆ.
ಎಲ್ಲರೂ ನೋಡಿದರು ಹೊಸ ಸೊಸೆಯ ಮುಖವನ್ನು
ಕೇಳಬಹುದಿತ್ತವಳು, "ಯಾಕೆ ಅತ್ತೇ?"

ಎಲ್ಲರೂ ಸರಿಸಿದರು ಸಾಂಬಾರನತ್ತ ಕಡೆ
ಮುಗಿಸಿದರು ಊಟವನು ಹಾಗೆ ಹೀಗೆ
ಇವಳು ಓಡಿದಳತ್ತ ದೂರವಾಣಿಯ ಕಡೆಗೆ
ನುಡಿದಳಿನಿಯನ ಕೂಡೆ ಕತೆಯಹಾಗೇ!

ಬಂದನಾ ಪತಿರಾಯ ಊಟಕ್ಕೆ ಮಧ್ಯಾಹ್ನ
ಹೊಸ ಮಡದಿ ಅಳುತಿಹಳು ಬಿಕ್ಕಿ ಬಿಕ್ಕಿ
ಬಡಿಸಿದಳು ಗಂಡನಿಗೆ, ತನಗೂನು ಜೊತೆಯಲ್ಲಿ
"ಅಳಬೇಡ ಕಣೆ" ಎಂದ ಪ್ರೀತಿ ಉಕ್ಕಿ

ತಟ್ಟೆಯೆಲ್ಲವ ಖಾಲಿ ಮಾಡಿದನು ನಿಮಿಷದಲಿ
ಹೋಗಬೇಕಲ್ಲವೇ ಕೆಲಸದತ್ತ?
"ಉಣ್ಣಮ್ಮ" ರಮಿಸಿದನು ಭೋರ್ಗರೆವ ಮಡದಿಯನು
ಬಾಯಿಗಿಟ್ಟಳು ಅವಳು ಮೊದಲ ತುತ್ತ

ನಿಂತೆ ಹೋಯಿತು ಅಳುವು, ಬಾಯೆಲ್ಲ ಕಹಿ ಕಹಿಯು
ಮನವು ಹೇಳಿತು, "ಅಯ್ಯೋ, ಕ್ಷಮಿಸಿ ಕ್ಷಮಿಸಿ!"
ಮಡದಿ ಕೊರಗುವಳೆಂದು ನುಡಿಯಿರದೆ ತಿಂದಿಹನು
ಹೇಳಿದಳು ಗಂಡನಿಗೆ ಮತ್ತೆ, "ಕ್ಷಮಿಸಿ!"

**ಜ್ಞಾನಕ್ಕೆ ಸದೃಶವಾದುದು ಇನ್ನೊಂದಿಲ್ಲ – ಆರ್ಯೋಕ್ತಿ.**

"ನೋಡಿ ಹೆಚ್ಚಮ್ಮ, ಕಹಿ" ಎಂದಿದ್ದಳವಳಮ್ಮ
ನೋಡಿಲ್ಲ ಇವಳದನು ಗಡಿಬಿಡಿಯಲಿ
ಯಾರೇನು ಅಂದಿಲ್ಲ, ಒಳ್ಳೆಯವರಿವರೆಲ್ಲ
ಇವಳು ನಕ್ಕಳು ಹಿಗ್ಗಿ ಮನಸಿನಲ್ಲಿ.

## ಅಭ್ಯಾಸ

1. ಸಾವಿತ್ರಿ ತೀರಾ ಮುಗ್ಧೆ ಹೇಗೆ?
2. ಅನನುಭವಿ ಸಾವಿತ್ರಿ ಮೊದಲ ಬಾರಿ ಗಂಡನ ಮನೆಯಲ್ಲಿ ಅಡುಗೆ ಮಾಡಿದ್ದು ಹೇಗೆ?
3. ಎರಡನೆಯ ಬಾರಿ ದೂರವಾಣಿಯ ಕಡೆಗೆ ಸಾವಿತ್ರಿ ಓಡಿದ್ದು ಏಕೆ?
4. 'ಅಯ್ಯೋ, ಕ್ಷಮಿಸಿ' ಎಂದು ಸಾವಿತ್ರಿ ಹೇಳಿದ್ದು ಏಕೆ?
5. 'ಯಾರೇನು ಅಂದಿಲ್ಲ, ಒಳ್ಳೆಯವರಿವರೆಲ್ಲ' ಸಾವಿತ್ರಿಯ ಈ ಹಿಗ್ಗಿಗೆ ಕಾರಣವೇನು?
6. ಈ ಪದ್ಯ ನೀಡುವ ಹಲವು ಸಂದೇಶಗಳ ಪಟ್ಟಿಮಾಡಿರಿ ಮತ್ತು ಅವುಗಳನ್ನು ಅನುಸರಿಸಿ.



ಜ್ಞಾನಿಯಾದರೆ ಸಾಲದು, ಮಾನವೀಯತೆ ಬೇಕು.

# ಪಠ್ಯಾಧಾರಿತ ಪದಕೋಶ

## ಅ

ಅಂಟು : ತಾಗು, ಸೇರು, ಒಂದು ಬಗೆಯ ಸಿಹಿ ತಿಂಡಿ

ಅಂತಾರಾಷ್ಟ್ರೀಯ : ರಾಷ್ಟ್ರರಾಷ್ಟ್ರಗಳಿಗೆ ಸಂಬಂಧಿಸಿದ

ಅಖಂಡತೆ : ಸಮಗ್ರತೆ, ಒಂದೇ ಎಂಬ ಭಾವ

ಅಗಣಿತ : ಲೆಕ್ಕಕ್ಕೆ ಸಿಗದಷ್ಟು

ಅಗ್ರಗಣ್ಯ : ಪ್ರಮುಖ, ಶ್ರೇಷ್ಠ

ಅಟ್ಟ : ಮನೆಯ ಒಳಗೆ ವಸ್ತುಗಳನ್ನು ಇಡಲು ಮರದಿಂದ ಮಾಡಿದ ಅಂತಸ್ತು.

ಅದ್ವಿತೀಯ : ಎರಡನೆಯದು ಇಲ್ಲದ್ದು, ಏಕೈಕ

ಅನಂತ : ಅಂತ್ಯ ಇಲ್ಲದ, ಅಪಾರ

ಅನ್ಯ : ಬೇರೆಯ, ಮತ್ತೊಬ್ಬ

ಅನಾವೃಷ್ಟಿ : ಮಳೆ ಇಲ್ಲದೆ ಹೋಗುವುದು

ಅನುವಾದ : ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಬದಲಾಯಿಸುವುದು, ಭಾಷಾಂತರ

ಅನ್ವಯ : ವಂಶ

ಅಬ್ಬರ : ಆರ್ಭಟ, ಗರ್ಜನೆ

ಅಭಯ : ಹೆದರಿಕೆ ಇಲ್ಲದ, ಸುರಕ್ಷೆಯ ಭಾವ

ಅಭಿನಯ : ನಟನೆ, ಅನುಕರಣೆ

ಅಭಿನವ : ಹೊಸದು

ಅಭಿಮಾನ : ಒಳ್ಳೆಯದಾದ ಹೆಮ್ಮೆ, ಗರ್ವ

ಅರಿವು : ತಿಳುವಳಿಕೆ

ಅರ್ಪಿಸು : ಒಪ್ಪಿಸು, ಕೊಡು

ಅವಸ್ಥೆ : ಸ್ಥಿತಿ, ಸನ್ನಿವೇಶ

ಅಸಹನೆ : ಸೈರಣೆ ಇಲ್ಲದಿರುವುದು

ಅಸಾಮಾನ್ಯ : ಸಾಮಾನ್ಯವಲ್ಲದ, ವಿಶೇಷ

ಅಳವಡಿಸು : ಹೊಂದಿಸು

ಅಳಿ : ನಾಶ, ಕೆಟ್ಟ, ಕ್ಷುದ್ರ, ದುಂಬಿ

ಅಸ್ತಿಭಾರ : ಬುನಾದಿ, ತಳಹದಿ

ಅಳಿಯ : ಸೋದರಿಯ ಮಗ, ಮಗಳ ಗಂಡ

## ಆ

ಆಕಾಂಕ್ಷೆ : ಬಯಕೆ, ಅಪೇಕ್ಷೆ

ಆಕ್ರಮಣ : ಮೇಲೆ ಬೀಳುವುದು, ದಾಳಿನಡೆಸುವುದು

ಆಗಸ : ಆಕಾಶ(ಸಂ), ಗಗನ, ಬಾನು

ಆಡಂಬರ : ತೋರಿಕೆ, ಅನಗತ್ಯ ಮೆರೆಯುವುದು

ಆದರ್ಶ : ಮಾದರಿ, ಗುರಿ

ಆದೇಶ : ಆಜ್ಞೆ, ಅಪ್ಪಣೆ

ಆಯ : ಆದಾಯ

ಆಯು : ಸಂಗ್ರಹಿಸು, ಹೆಕ್ಕು.



**ಮೂಢನಂಬಿಕೆಗಳು ದುರ್ಬಲ ಮನಸ್ಸಿನ ಕನ್ನಡಿ – ಬರ್ಕ್.**

ಆತ್ಮವಿಶ್ವಾಸ : ತನ್ನಬಗ್ಗೆ ಇರುವ ನಂಬಿಕೆ

ಆಪ್ತ : ನಂಬಿಕೆಗೆ ಅರ್ಹನಾದವ, ಆತ್ಮೀಯ

ಆಶಯ : ಅಭಿಪ್ರಾಯ

### ಇ

ಇಂಪು : ಮಧುರ, ರುಚಿ

ಇಬ್ಬನಿ : ಹಿಮಕಣ, ಮಂಜು

ಇರಿ : ತಿವಿ, ಚುಚ್ಚು, ಇದ್ದುಬಿಡಿ

### ಉ

ಉಗಿ : (ನಾ.ಪ.) ನೀರು ಕುದಿಯುವಾಗಿನ ಆವಿ (ಕ್ರಿ.ಪ) ಹೊರಚೆಲ್ಲು

ಉಪದೇಶ : ಬೋಧನ, ಹಿತವನ್ನು ಹೇಳುವುದು

ಉಗ್ರ : ಕ್ರೂರಿ, ಭಯಂಕರ

ಉದ್ಗಾರ : ಭಾವಾವೇಶದ ಮಾತು

ಉದ್ಘಾಟನೆ : ಆರಂಭ

ಉದ್ದಿಮೆ : ಉದ್ಯೋಗ, ಕೈಗಾರಿಕೆ

ಉಲ್ಲಾಸ : ಸಂತೋಷ, ಉತ್ಸಾಹ

### ಎ

ಎರೆ : (ನಾ.ಪ.) ಕಪ್ಪಾದ ಭೂಮಿ, (ಕ್ರಿ.ಪ) ಹೊಯ್ಯು, ಸುರಿ, ಬೇಡು, ಯಾಚಿಸು

ಎಲ್ಲೆ : ಗಡಿ, ಮೇರೆ

ಎಸಗು : ಮಾಡು

ಎಸೆ : (ಕ್ರಿ.ಪ.) ಚೆಲ್ಲು, (ನಾ.ಪ.) ಶೋಭೆ

### ಏ

ಏಕಾಗ್ರತೆ : ಒಂದೇ ಗುರಿಯಲ್ಲಿ ಗಮನವನ್ನು ಇರಿಸುವಿಕೆ.

### ಒ

ಒಲುಮೆ : ಪ್ರೀತಿ, ಮಮತೆ,

### ಕ

ಕಡಿತ : ಕತ್ತರಿಸುವುದು, ಕಚ್ಚುವಿಕೆ

ಕಣ್ಣುಬೀಳು : ದೃಷ್ಟಿತಾಕು

ಕತ್ತು : ಕೊರಳು

ಕದಡು : ಕಲಕು, ಕರಡು

ಕರಗು : ಗಟ್ಟಿಯಾದದ್ದು ನೀರಿನಂತಾಗು

ಕರಡಿಗೆ : ಮುಚ್ಚಳವಿರುವ ಚಿಕ್ಕ ಡಬ್ಬ

ಕರ್ತವ್ಯ : ಮಾಡಲೇಬೇಕಾದ ಕೆಲಸ

ಕಪ್ಪು : ಕರಿದು, ಕತ್ತಲು

ಕರ್ಪೂರ : ಒಂದು ಬಗೆಯ ಸುಗಂಧ ದ್ರವ್ಯ, ಶೀಘ್ರ ಉರಿಯುವ ರಾಸಾಯನಿಕ ವಸ್ತು, ಕಪ್ಪುರ (ತದ್ಭವ)

ಕಲರವ : ಇಂಪಾದ ಧ್ವನಿ

ಕಲೆ : (ನಾ.ಪ.) ಗುರುತು, (ಕ್ರಿ.ಪ.) ಸೇರು.

ಕಲಾತ್ಮಕ : ಕುಸುರಿ ಕೆಲಸದಿಂದ ಕೂಡಿದುದು

ಕವಿ : (ನಾ.ಪ.) ಕಾವ್ಯವನ್ನು ರಚಿಸುವವನು, ಕಬ್ಬಿಗ (ತದ್ಭವ), (ಕ್ರಿ.ಪ.) ಆವರಿಸು.

ಕಳವಳ : ತಳಮಳ, ಕಸಿವಿಸಿ

ಕಳೆ : (ನಾ.ಪ.) ಕಾಂತಿ, ಬೆಳೆಯನಡುವಿನ ಅಪ್ರಯೋಜಕ ಸಸ್ಯ (ಕ್ರಿ.ಪ.) ಬಿಟ್ಟುಬಿಡು.

ಕಾಯಿದೆ : ಕಾನೂನು

ಕಾಳಜಿ : ಗೊಡವೆ, ಚಿಂತೆ, ಜೋಪಾನ

ಕಿತ್ತ : ಕೀಳ್ (ಧಾತು), ಎಳೆದು ತೆಗೆದ



**ಜನನಿ, ಜನ್ಮಭೂಮಿ ಈ ಎರಡೂ ಸ್ವರ್ಗಕ್ಕಿಂತ ಹೆಚ್ಚಿನವು – ಆರ್ಯೋಕ್ತಿ.**

ಕುಕಿಲ್ : ಕೋಗಿಲೆಯ ಕೂಗು

ಕೂಸು : ಮಗು, ಹೆಣ್ಣು

ಕೈದಿ : ಸೆರೆಯಾಳು,

ಕೊಂಚ : ಸ್ವಲ್ಪ

ಕೊಡುಗೆ : ನೀಡಿದ್ದು, ಕಾಣಿಕೆ

ಕ್ರೀಡೆ : ಆಟ

ಕ್ಷಣಿಕ : ಕ್ಷಣಕಾಲದ್ದು

ಕ್ಷೀಣ : ಸೊರಗು, ಕುಗ್ಗು

**ಖ**

ಖ : ಆಕಾಶ

ಖಂಡಿಸು : ಕಡಿ, ಕತ್ತರಿಸು, ತಪ್ಪೆಂದು ಸಾಧಿಸು

ಖಗ : ಪಕ್ಷಿ, ಸೂರ್ಯ

ಖಚಿತ : ನಿಶ್ಚಿತವಾದ

ಖಜಾನೆ : ಬೊಕ್ಕಸ, ಭಂಡಾರ

ಖ್ಯಾತಿ : ಪ್ರಸಿದ್ಧಿ, ಹೆಸರುವಾಸಿ

**ಗ**

ಗಂಧ : ಸುವಾಸನೆ, ಶ್ರೀಗಂಧದ ಮರ

ಗಣ್ಯ : ಗಣನೆಗೆ ಯೋಗ್ಯನಾದವನು, ಪ್ರಮುಖ

ಗದ್ದಲ : ಗಲಾಟೆ, ಗೊಂದಲ

ಗರ್ವ : ಸೊಕ್ಕು, ಅಹಂಕಾರ

ಗಸ್ತು : ಪಹರೆ, ಕಾವಲು

ಗಳಿಗೆ : ೨೪ ನಿಮಿಷಗಳ ಅವಧಿ, ಘಟಿಕಾ [ಸಂ]

ಗಾಢ : ಅತಿಶಯ, ದಟ್ಟ

ಗಾಬರಿ : ಭಯ, ಅಂಜಿಕೆ

ಗಿಟ್ಟಿಸು : ದೊರಕಿಸಿಕೊಳ್ಳು, ಸಂಪಾದಿಸು

ಗಿಡುಗ : ಹದ್ದಿನಜಾತಿಯ ಅದಕ್ಕಿಂತಲೂ ದೊಡ್ಡದಾದ ಪಕ್ಷಿ, ಡೇಗೆ

ಗೈ : ದುಡಿ

ಗೂಡು : ಬೀಡು, ಬೋನು

ಗೈಮೆ : ದುಡಿಮೆ

ಗೊಂದಲ : ಗಲಿಬಿಲಿ, ಗೋಜಲು, ಗದ್ದಲ

ಗೊಗ್ಗಯ್ಯ : ಮೈಲಾರದೇವನ ಭಕ್ತ, ಗುಮ್ಮ ಅಂಜಿಕೆ ಹುಟ್ಟಿಸುವ ದೆವ್ವ

ಗೋಷ್ಠಿ : ಸಭೆ, ಕೂಟ.

ಗ್ರಹಿಸು : ಸ್ವೀಕರಿಸು, ತಿಳಿದುಕೊಳ್ಳು

ಗ್ರಾಮ್ಯ : ಗ್ರಾಮದಲ್ಲಿ ತಯಾರಿಸಿದ, ವ್ಯಾಕರಣ ವಿರುದ್ಧವಾದುದು

**ಘ**

ಘನ : ಅಧಿಕವಾದುದು, ಮೋಡ

ಘೋರ : ಭಯಂಕರ, ಪ್ರಚಂಡ

ಘೋಷಿಸು : ಗಟ್ಟಿಯಾಗಿ ಹೇಳು, ಡಂಗುರಹೊಡೆ

**ಚ**

ಚಿಂತಕ : ನಿರ್ದಿಷ್ಟ ವಿಷಯವಾಗಿ ಚಿಂತಿಸುವಾತ, ಧ್ಯಾನಿಸುವವ

ಚಕ್ರವರ್ತಿ : ಸಾರ್ವಭೌಮ, ಸಾಮ್ರಾಟ

ಚಳುವಳಿ : ಸಾಮೂಹಿಕ ಪ್ರತಿಭಟನೆ, ಆಂದೋಲನ

ಚೈತನ್ಯ : ಚಟುವಟಿಕೆ, ಶಕ್ತಿ, ಅರಿವು

ಚೊಚ್ಚಲು : ಮೊತ್ತಮೊದಲನೆಯದು



**ಆದರ್ಶ ತಾಯಿಯೊಬ್ಬಳು ನೂರುಜನ ಗುರುಗಳಿಗಿಂತ ಶ್ರೇಷ್ಠಳು – ಬೈಬಲ್.**

## ಛ

ಛಲ : ದೃಢನಿಶ್ಚಯ, ಹಠಮಾರಿತನ

## ಜ

ಜಗಲಿ : ಕುಳಿತುಕೊಳ್ಳುವ ಮಣ್ಣಿನ ಕಟ್ಟೆ

ಜಲ : ನೀರು

ಜವಾಬು : (ಹಿಂದಿ) ಜವಾಬ್, ಉತ್ತರ

ಜವಾಬ್ದಾರಿ : ಹೊಣೆಗಾರಿಕೆ, ಹೊಣೆ

ಜಾಗೃತಿ : ಎಚ್ಚರ

ಜೀವಕೋಟಿ : ಅಸಂಖ್ಯಾತ ಜೀವಿಗಳು, ಜೀವರಾಶಿ

ಜೋಡಿ : ಜೊತೆ, ಸಮಾನವಾದದ್ದು

ಜ್ಯೋತಿ : ಬೆಳಕು, ದೀಪ

## ಟ

ಟೀಕೆ : ವ್ಯಾಖ್ಯಾನ, ಆಕ್ಷೇಪಣೆ

## ತ

ತಂತು : ತಂದಿತು, ಸರಿಗೆ, ನೂಲು

ತತ್ತರ : ಕಕ್ಕಾಬಿಕ್ಕಿ, ದಿಗ್ಭ್ರಮೆ

ತತ್ತ್ವ : ಅದರ ಸ್ವರೂಪ, ಭಾವ, ತಿರುಳು.

ತತ್ಪರಿಣಾಮ : ಆಕಾರಣ, ಆ ಕಾರ್ಯದ ಫಲ

ತಲ್ಲಣ : ಹೆದರಿಕೆ, ಗಾಬರಿ, ತಳಮಳ

ತೃಪ್ತಿ : ಸಂತುಷ್ಟಿ, ತಣಿವು, ಸಮಾಧಾನ

ತಾತ : ಅಜ್ಜ, ತಂದೆ

ತಾರಕ : ಸಂರಕ್ಷಕ, ನಕ್ಷತ್ರ, ಏರಿದ ಧ್ವನಿ

ತಾರಾಮಂಡಲ : ನಕ್ಷತ್ರ ಸಮೂಹ, ನಕ್ಷತ್ರಗಳಿಂದ ಕೂಡಿದ ಆಕಾಶ

ತಾಳ್ಮೆ : ಸಹನೆ, ಸೈರಣೆ

ತುಸು : ಸ್ವಲ್ಪ

ತ್ಯಾಗ : ತನಗೆ ಅಗತ್ಯವಾಗಿದ್ದರೂ ಅದನ್ನೆಣಿಸದೆ ಇನ್ನೊಬ್ಬರಿಗೆ ನೀಡುವುದು, ತ್ಯಜಿಸು (ಚಾಗ –ತದ್ಭವ)

ತಿಲಕ : ಹಣೆಯ ಬೊಟ್ಟು, ಶ್ರೇಷ್ಠ

ತೆರಿಗೆ : ಕಂದಾಯ

ತೇರು : ರಥ

## ದ

ದಂಪತಿ : ಹೆಂಡತಿ ಮತ್ತು ಗಂಡ

ದಟ್ಟ : ಸಾಂದ್ರ, ನಿಬಿಡ

ದಟ್ಟಣೆ : ಒತ್ತೊತ್ತಾಗಿ ಇರುವ ಜನ ಸಮೂಹ

ದಡ : ತೀರ, ತಟ (ಸಂ.)

ದಣಿ : (ನಾ.ಪ) ಒಡೆಯ, (ಕ್ರಿ.ಪ.) ಬಳಲು, ಆಯಾಸಪಡು.

ದಬ್ಬಾಳಿಕೆ : ದೌರ್ಜನ್ಯದ ಆಡಳಿತ

ದಶಕ : ಹತ್ತು ವರ್ಷಗಳ ಕಾಲ, ಹತ್ತರ ಗುಂಪು

ದಾಂಡಿಗ : ತೋರ ಮತ್ತು ಬಲಶಾಲಿಯಾದವ, ಬ್ಯಾಟು ಹಿಡಿದವ

ದಾಖಲೆ : ಬರೆದಿಡಲು ಯೋಗ್ಯವಾದುದು, ಆಧಾರವಾದ ಕಾಗದ ಪತ್ರ

ದಾನವ : ರಾಕ್ಷಸ

ದಾರ್ಶನಿಕ : ತತ್ತ್ವಜ್ಞಾನಿ, ತತ್ತ್ವಶಾಸ್ತ್ರ (ವೈಶೇಷಿಕ ನ್ಯಾಯ, ವೇದಾಂತ, ಸಾಂಖ್ಯ, ಯೋಗ, ಮೀಮಾಂಸೆ) ವನ್ನು ಅವಲೋಕಿಸಿ ಜ್ಞಾನ ಪಡೆದವ

ದಾಹ : ಸುಡುವಿಕೆ, ಬಾಯಾರಿಕೆ

**ಎಷ್ಟು ತಿಳಿದಿದೆಯೋ ಅದಕ್ಕಿಂತ ಕಡಿಮೆ ಮಾತಿರಲಿ – ಶೇಕ್ಸ್‌ಪಿಯರ್.**

ದಿಟ್ಟೆದೆ : ಧೈರ್ಯಶಾಲಿ

ದಿವ್ಯ : ಶ್ರೇಷ್ಠ, ದಿವ (ಸ್ವರ್ಗ)ಕ್ಕೆ ಸಂಬಂಧಿಸಿದ

ದಿಕ್ಕು : ದೆಸೆ, ಆಶ್ರಯ, ರಕ್ಷಣೆ

ದೀನ : ಬಡವ, ವಿನಯಶಾಲಿ, ನಮ್ರ.

ದೌರ್ಜನ್ಯ : ದುಷ್ಟತನ, ಕೆಟ್ಟತನ

ದ್ವಿತೀಯ : ಎರಡನೆಯದು

## ಧ

ಧನ್ಯ : ಕೃತಾರ್ಥ, ಕೃತಕೃತ್ಯ

ಧಾರಿ : ಧರಿಸಿದವ, ಹೊಂದಿದವ

ಧೀಮಂತ : ಬುದ್ಧಿವಂತ, ದಿಟ್ಟ

ಧೀರತನ : ಧೈರ್ಯವಂತಿಕೆ

## ನ

ನಂಜು : ವಿಷ

ನಂಟು : ಬಾಂಧವ್ಯ

ನತದೃಷ್ಟ : ಅದೃಷ್ಟ ಇಲ್ಲದವ

ನನೆ : ಮೊಗ್ಗು

ನಯನ ಮನೋಹರ : ಕಣ್ಣಿಗೆ ಸುಂದರವಾದುದು

ನರ : ಮನುಷ್ಯ, ದೇಹದೊಳಗಿನ ನರ

ನಲಿವು : ಆನಂದ, ಸಂತೋಷ

ನಾರಿ : ಹೆಣ್ಣು, ಸ್ತ್ರೀ, ಬಿಲ್ಲಿನ ಹಗ್ಗ

ನಿದರ್ಶನ : ಉದಾಹರಣೆ, ದೃಷ್ಟಾಂತ

ನಿಧನ : ಸಾವು

ನಿಭಾಯಿಸು : ನಿರ್ವಹಿಸು, ಸೈರಿಸು

ನಿರ್ಗತಿಕ : ಗತಿ ಇಲ್ಲದವ,ಅಸಹಾಯಕ

ನಿರ್ದಯತೆ : ದಯೆಯಿಲ್ಲದಿರುವಿಕೆ

ನಿರೀಕ್ಷೆ : ಕಾಯುವಿಕೆ, ಆಸೆಯಿಂದ ಇದಿರುನೋಡುವುದು,

ನಿರ್ದಾಕ್ಷಿಣ್ಯ : ದಾಕ್ಷಿಣ್ಯಕ್ಕೆ ಒಳಗಾಗದ, ಖಂಡತುಂಡವಾದ

ನಿಶ್ಚಲ : ಚಲಿಸದೆ ಇರುವುದು, ಅಚಲ

ನೀರೆರೆ : ಪೋಷಿಸು, ನೀರನ್ನು ಹೊಯ್ಯು

ನೂಕು : ತಳ್ಳು, ದೂಡು

ನೆತ್ತಿ : ತಲೆಯ ಮಧ್ಯಭಾಗ, ತುದಿ

ನೆಯ್ : ನೆಯ್ಯು, ಹೆಣೆ, ಜೋಡಿಸು, ತುಪ್ಪ.

ನೆರವು : ಸಹಾಯ

ನೊಗ : ಗಾಡಿ ಎತ್ತಿನ ಹೆಗಲಮೇಲಿರಿಸುವ ಮರದ ಸಾಧನ

ನ್ಯೂನತೆ : ಕೊರತೆ, ಕುಂದು

## ಪ

ಪಟ : ಧ್ವಜ, ಬಟ್ಟೆ

ಪಟ್ಟ : ಸಿಂಹಾಸನ, ಗದ್ದುಗೆ, ಪಟ್ಟಕಟ್ಟುವಾಗ ಹಣೆಯಲ್ಲಿ ಧರಿಸುವ ಆಭರಣ

ಪಡೆ : (ನಾ.ಪ.) ಸೈನ್ಯ, (ಕ್ರಿ.ಪ.) ಹೊಂದು, ಗಳಿಸು

ಪತ್ತೆ : ಸುಳಿವು, ಕಂಡು ಹಿಡಿಯುವುದು

ಪದವಿನ್ಯಾಸ : ಶಬ್ದಜೋಡಣೆಯ ಲಾಲಿತ್ಯ – ಚಾತುರ್ಯ

ಪದ್ಧತಿ : ಹಿರಿಯರು ನಡೆದು ತೋರಿದ ರೀತಿ, ರಿವಾಜು

ಪಯಣಿಗ : ಪ್ರಯಾಣಿಕ (ಸಂ)

ಪರದೇಶಿ : ಬೇರೆ ಪ್ರದೇಶದವ, ಅನಾಥ

ಪರಾರ್ಥ : ಪರರಿಗಾಗಿ (Xಸ್ವಾರ್ಥ)

**ಸೋಮಾರಿತನವನ್ನು ಮೊದಲು ತೊಲಗಿಸು; ಅದೇ ನಿನ್ನ ಮೊದಲ ಶತ್ರು – ಅಬ್ರಹಂ ಲಿಂಕನ್.**

ಪರಿಧಿ : ವೃತ್ತದ ಸುತ್ತುಗೆರೆ, ಆವರಣ

ಪರಿಶ್ರಮ : ಬಳಲಿಕೆ, ಆಯಾಸ

ಪರ್ವತಬಾಳೆ : ಬೆಟ್ಟದಲ್ಲಿ ಬೆಳೆಯುವ ಬಾಳೆ.

ಪಾರತಂತ್ರ್ಯ : ಇನ್ನೊಬ್ಬರ ಅಧೀನದ ಬದುಕು

ಪಾಲಕ : ಪಾಲಿಸುವವ, ರಕ್ಷಕ

ಪಾಲನೆ : ರಕ್ಷಿಸುವುದು, ಕಾಪಾಡುವುದು

ಪಾವನ : ಪರಿಶುದ್ಧ, ಬೆಂಕಿ

ಪಿಡಿ : (ನಾ.ಪ.) ಹಿಡಿಕೆ, ಕಾವು, ಹೆಣ್ಣು ಆನೆ (ಕ್ರಿ.ಪ.) ಹಿಡಿ.

ಪೀಳಿಗೆ : ಪರಂಪರೆ, ವಂಶ, ಸಂತತಿ

ಪುಟ್ಟ : ಚಿಕ್ಕ, ಸಣ್ಣ

ಪುರೋಹಿತ : ಶಾಸ್ತ್ರದಂತೆ ವಿಧಿಗಳನ್ನು ಮಾಡಿಸುವಾತ

ಪೂರ್ಣಾಂಗ : ಪೂರ್ಣ ರೂಪ, ದೇಹದಲ್ಲಿ ಯಾವುದೇ ಊನ ಇಲ್ಲದವ

ಪೆಚ್ಚು : ಮಂಕು, ಹೆಡ್ಡತನ, ಕಳೆಯಿಲ್ಲದಂತಾಗು

ಪೈಪೋಟಿ : ಸ್ಪರ್ಧೆ, ಮೇಲಾಟ

ಪೋಣಿಸು : ಸೇರಿಸು, ಜೊತೆಗೂಡಿಸು

ಪೋಷಿಸು : ಪಾಲನೆ ಮಾಡು, ಕಾಪಾಡು

ಪ್ರಕಾರ : ರೀತಿ, ಬಗೆ

ಪ್ರತಿ : ಎದುರು, ನಕಲು, ಸಮಾನ

ಪ್ರತೀಕ : ಪ್ರತಿರೂಪ, ಗುರುತು.

ಪ್ರತಿಭಟನೆ : ವಿರೋಧ

ಪ್ರತ್ಯಕ್ಷ : ಕಣ್ಣೆದುರಿನದು, ಕಣ್ಣಿಗೆ ಕಾಣು

ಪ್ರಧಾನ : ಮುಖ್ಯವಾದುದು, ಪ್ರಮುಖ

ಪ್ರವೃತ್ತಿ : ಮನಸ್ಸಿನ ಒಲವು, ಸ್ವಭಾವ, ಆಸಕ್ತಿ

ಪ್ರವೀಣ : ಪರಿಣತ, ನಿಷ್ಣಾತ, ಜಾಣ

ಪ್ರಸನ್ನ : ಸಂತುಷ್ಟವಾದ, ತೃಪ್ತಿಹೊಂದಿದ,

ಪ್ರಾಮಾಣಿಕ : ನಂಬಿಕೆಗೆ ಅರ್ಹನಾದವ, ನಂಬಿಗಸ್ತ

ಪ್ರಾಯಶಃ : ಬಹುಮಟ್ಟಿಗೆ

## ಬ

ಬಗಲು : ಕಂಕುಳು

ಬತ್ತು : ಒಣಗು, ಸೊರಗು

ಬಡಿ : ಹೊಡೆ

ಬಯಲಾಡಂಬರ : ಒಣ ಹೆಮ್ಮೆ, ಪೊಳ್ಳು ಬಡಿವಾರ

ಬರಡು : ನಿಸ್ಸಾರವಾದುದು, ಬಂಜೆತನ

ಬಲ : ಶಕ್ತಿ.

ಬಲ್ಲವ : ತಿಳಿದವ, ಜ್ಞಾನಿ

ಬಳಲು : ಆಯಾಸಪಡು, ಶ್ರಮಪಡು.

ಬಸ : ವಶ (ಸಂ)

ಬಳಗ : ಗುಂಪು, ಒಂದು ಮನೆ ಅಥವಾ ವಂಶಕ್ಕೆ ಸೇರಿದವರು

ಬಳಸು : (ನಾ.ಪ.) ಹತ್ತಿರವಲ್ಲದ, (ಕ್ರಿ.ಪ.) ಉಪಯೋಗಿಸು, ಸುತ್ತು

ಬಳಲು : ಆಯಾಸಗೊಳ್ಳು

ಬಾಳು : (ನಾ.ಪ.) ಕತ್ತಿ, ಜೀವನ, (ಕ್ರಿ.ಪ.) ಜೀವಿಸು, ಬಾಳುವೆ ಮಾಡು

ಬಿಚ್ಚು : ತೆರೆ, ತೆಗೆ

ಬಿರುದು : ಗೌರವಸೂಚಕವಾಗಿ ಕೊಡುವ ಹೆಸರು, ಪದವಿ

ಬಿರುಸು : ಕಠಿಣ, ಕಾರಂಜಿಯಂತಹ ಸುಡುಮದ್ದು

ಬೀರು : (ನಾ.ಪ) ಕಪಾಟು, (ಕ್ರಿ.ಪ)ಎಸೆ, ಎರಚು



**ನೀನು ಸತ್ಯವನ್ನು ಕಾಪಾಡಿದರೆ, ಸತ್ಯವು ನಿನ್ನನ್ನು ರಕ್ಷಿಸುತ್ತದೆ – ಮಹಾತ್ಮ ಗಾಂಧೀಜಿ.**

ಬುಸುಗುಡು : ಬುಸ್ ಎಂದು ಶಬ್ದಮಾಡು, ಸಿಟ್ಟಿಗೇಳು

ಬೆರಗು : ಆಶ್ಚರ್ಯ

ಬೆರಳೆಣಿಕೆ : ಕೆಲವೇ ಕೆಲವು, ಬೆರಳುಗಳಿಂದ ಎಣಿಸುವಷ್ಟು

ಬೈಗು : ಸಂಜೆ.

ಬೋಧಪ್ರದ : ಜ್ಞಾನ ನೀಡುವ

ಭಕ್ಷಿಸು : ತಿನ್ನು

ಭರವಸೆ : ವಿಶ್ವಾಸ, ಆಶ್ವಾಸನೆ

ಭವ್ಯ : ಉತ್ಕೃಷ್ಟ, ಉತ್ತಮ

ಭದ್ರ : ಸುರಕ್ಷೆ, ಸುಖ, ಜೋಪಾನ

ಭಾಜನ : ಅರ್ಹ, ಯೋಗ್ಯ, ಪಾತ್ರೆ, ವಿಭಾಗಿಸುವುದು

ಭಾವಪೂರ್ಣ : ಮನಸ್ಸಿನ ಭಾವನೆಗಳನ್ನು ಪೂರ್ಣವಾಗಿ ಒಳಗೊಂಡ

ಭಾವವಿಲಾಸ : ಚಿತ್ತವೃತ್ತಿ, ಆನಂದ, ಹಾಸ್ಯ ಇತ್ಯಾದಿಗಳ ವಿಹಾರ

ಭಾಸ್ಕರ : ಸೂರ್ಯ

ಭಿನ್ನ : ಚೂರು, ಭೇದ, ಒಡೆದ

## ಮ

ಮಂಡಿಸು : ಕುಳಿತುಕೊಳ್ಳು, ವಿಷಯವನ್ನು ಪ್ರತಿಪಾದಿಸು

ಮಗ್ಗುಲು : ಪಕ್ಕ, ಬದಿ

ಮತೀಯ : ಮತಕ್ಕೆ ಸಂಬಂಧಿಸಿದ

ಮತ್ತು : ಅಮಲು, ಮಾದಕತೆ, ಮದ

ಮನುಜ : ಮನುಷ್ಯ

ಮನೋಭಾವ : ಅಭಿಪ್ರಾಯ, ಮನದ ಭಾವನೆ

ಮರಳಿಸು : ಹಿಂದಿರುಗಿಸು

ಮರುಗು : ದುಃಖಿಸು, ವ್ಯಥೆಪಡು

ಮಹತ್ವ : ಹಿರಿಮೆ, ಘನತೆ, ದೊಡ್ಡದು

ಮಹಾನುಭಾವ : ಶ್ರೇಷ್ಠನಾದವನು

ಮಳೆಬಿಲ್ಲು : ಕಾಮನಬಿಲ್ಲು

ಮಾತೆ : ತಾಯಿ

ಮಾನವ : ಮನುಷ್ಯ

ಮಾನಹಾನಿ : ಅವಮಾನ

ಮಾನವಶ್ರಮ : ಒಬ್ಬ ಮನುಷ್ಯನ ದಿನದ ದುಡಿಮೆ

ಮಾನ್ಯ : ಗೌರವಸ್ಥ, ಒಪ್ಪತಕ್ಕ

ಮಾಪಕ : ಅಳೆಯುವ ಸಾಧನ

ಮಾಪನ : ಅಳೆಯುವುದು

ಮಾರ್ಮಿಕ : ಮನಸ್ಸಿಗೆ ತಾಗುವ

ಮಿಡಿ : (ನಾ.ಪ.) ಎಳೆಯ ಕಾಯಿ, ಹೀಚುಗಾಯಿ (ಕ್ರಿ.ಪ.) ಮೀಟು, ಮೇಲಕ್ಕೆ ಹಾರಿಸು

ಮಿರುಗು : ಹೊಳೆಯು.

ಮೀಸಲು : ತೆಗೆದಿರಿಸಿದ್ದು, ಮುಡಿಪು

ಮುಕ್ತ : ಬಿಡುಗಡೆ ಹೊಂದಿದ, ಬಂಧನವಿಲ್ಲದ, ತೆರೆದ

ಮುಗಿಲು : ಮೋಡ, ಆಕಾಶ

ಮುಗುಳು : ಮೊಗ್ಗು

ಮುದ : ಸಂತೋಷ, ಹರ್ಷ

ಮುನ್ನುಡಿ : ಮೊದಲ ಮಾತು

ಮುರಿ : ಬಾಗು, ಡೊಂಕಾಗು, ತುಂಡುಮಾಡು

ಮುರಿತ : ತುಂಡಾಗುವಿಕೆ



**ಒಳ್ಳೆಯ ಪುಸ್ತಕ ಸಂಗ್ರಹಾಲಯವು ಒಂದು ವಿಶ್ವವಿದ್ಯಾನಿಲಯ – ಥಾಮಸ್ ಕಾರ್ಲೆಸ್.**

ಮೂಕಸಾಕ್ಷಿ : ಎದುರಿದ್ದೂ ಅಭಿಪ್ರಾಯವನ್ನು ಹೇಳಲಾಗದವ

ಮೂಡು : (ನಾ.ಪ.) ಪೂರ್ವ ದಿಕ್ಕು (ಕ್ರಿ.ಪ.) ಉದಯಿಸು

ಮೂಢನಂಬಿಕೆ: ವಿವೇಚನೆಯಿಲ್ಲದೆ ನಂಬುವುದು, ಕುರುಡುನಂಬಿಕೆ

ಮೃದು : ಕೋಮಲ (ಮಿದು –ತದ್ಭವ)

ಮೆತ್ತಗೆ : ಮೃದು

ಮೆರೆ : ಪ್ರಕಾಶಿಸು, ಪ್ರದರ್ಶನಗೊಳ್ಳು

## ರ

ರಮ್ಯ : ಮನೋಹರ, ರಮಣೀಯ

ರಹಸ್ಯ : ಗುಟ್ಟು

ರಾಜ್ಯಮಟ್ಟ : ರಾಜ್ಯಕ್ಕೆ ಸೀಮಿತವಾದ

ರಾಷ್ಟ್ರೀಯ : ರಾಷ್ಟ್ರಕ್ಕೆ ಸಂಬಂಧಿಸಿದ

ರೋಮಾಂಚನ : ಮೈಕೂದಲು ನೆಟ್ಟಗಾಗುವಿಕೆ

## ಲ

ಲಗುಬಗೆ : ಬೇಗಬೇಗ, ಚುರುಕು

ಲಾಟಿ : ಬಡಿಗೆ, ದೊಣ್ಣೆ

ಲೀನ : ಆಸಕ್ತ, ಮಗ್ನ, ಮುಳುಗಿದ

ಲೆಂಕ : ನಿಷ್ಠಾವಂತನಾದ ಸೇವಕ, ದಾಸ

## ವ

ವಯೋಮಿತಿ : ವಯಸ್ಸಿನ ಮಿತಿ

ವಲಸೆ : ಊರು ಬಿಟ್ಟು ಇನ್ನೊಂದು ಊರಿಗೆ ಹೋಗುವಿಕೆ

ವಾದ : ತರ್ಕ, ಚರ್ಚೆ

ವಾಸನೆ : ಮೂಗು ಗ್ರಹಿಸುವಂಥಾದ್ದು ಪರಿಮಳ

ವಿರಳ : ಬಿಡಿಬಿಡಿಯಾದ, ಅಪರೂಪ

ವಿಶಾಲ : ವಿಸ್ತಾರ

ವಿಸ್ಮಯ : ಅಚ್ಚರಿ, ಸೋಜಿಗ

ವಿಹಾರಿ : ತಿರುಗಾಡುತ್ತ ವಿನೋದವಾಗಿ ಕಾಲಕಳೆಯುವವ

ವೇದಾಂತ : ವೇದದ ಕಡೆಯಭಾಗ

ವೇದಿಕೆ : ಭಾಷಣ ನಾಟಕಗಳಿಗಾಗಿರುವ ಎತ್ತರವಾದ ಸ್ಥಳ, ಪ್ರದರ್ಶನ ಸ್ಥಳ

ವೃತ್ತಿ : ಕಸುಬು, ಉದ್ಯೋಗ.

ವೈಯಕ್ತಿಕ : ಒಬ್ಬ ವ್ಯಕ್ತಿಗಷ್ಟೇ ಸಂಬಂಧಿಸಿದ

ವ್ಯತ್ಯಯ : ವಿರೋಧ, ಅಡ್ಡಿ

ವ್ಯತಿರಿಕ್ತ : ವಿರೋಧ, ಭಿನ್ನ

ವ್ಯರ್ಥ : ನಿರುಪಯುಕ್ತ, ನಿಷ್ಪ್ರಯೋಜಕ

## ಶ

ಶತಕ : ನೂರು, ನೂರರ ಗುಂಪು

ಶಪಿಸು : ಶಾಪನೀಡು, ಬೈಯ್ಯು

ಶರಣು : ರಕ್ಷಣೆ, ವಂದನೆ

ಶಾಶ್ವತ : ಸ್ಥಿರ, ಎಂದೆಂದೂ ಇರುವ

ಶಿಖರ : ಶ್ರೇಷ್ಠ, ತುದಿ

ಶೈಲಿ : ರಚನೆಯರೀತಿ, ಧಾಟಿ,

ಶೋಭೆ : ಚೆಲುವು, ಸೌಂದರ್ಯ

ಶ್ರಮ : ಆಯಾಸ, ಬಳಲಿಕೆ

## ಸ

ಸಂಕೇತ : ಗುರುತು

ಸಂತಸ : ಸಂತೋಷ (ಸಂ)

**ನಿಜವಾದ ಶಿಕ್ಷಣವೆಂದರೆ ಮಾನವೀಯತೆಯ ವಿಕಾಸ – ಸ್ವಾಮಿ ವಿವೇಕಾನಂದ.**

ಸಂತೃಪ್ತಿ : ಆನಂದ, ತಣಿವು

ಸಂದಣಿಸು : ಗುಂಪುಗೂಡು

ಸಂದೇಶ : ನಿರೂಪ, ಸುದ್ದಿ

ಸಂಯಮ : ಹತೋಟಿ, ಇಂದ್ರಿಯ ನಿಗ್ರಹ

ಸಕಲ : ಎಲ್ಲ

ಸಕಾಲಿಕ : ಕಾಲಕ್ಕೆ ಸರಿಯಾದ, ಸಮಯಕ್ಕೆ ಸರಿಯಾದ

ಸನ್ನೆ : ಸುಳಿವು, ಮೀಟುಗೋಲು, ಸಂಜ್ಞಾ [ಸಂ]

ಸಫಲ : ಯಶಸ್ವಿ, ಫಲವನ್ನು ಪಡೆದ

ಸಮತೋಲನ : ಸಮ, ಸರಿಸಮಾನ

ಸಮರ್ಥ : ಗಟ್ಟಿಗ, ದಕ್ಷ, ಶಕ್ತಿಶಾಲಿ

ಸಮೂಹ : ಗುಂಪು, ಸಮುದಾಯ, ರಾಶಿ

ಸರದಾರ : ಮುಖಂಡ, ಅಧಿಕಾರಿ, ಶೂರ

ಸರದಿ : ಕ್ರಮ, ಬಾರಿ, ಪಾಳಿ

ಸಹಸ್ರ : ಸಾವಿರ (ತದ್ಭವ)

ಸಾರ್ಥಕ್ಯ : ಪ್ರಯೋಜನ, ಉಪಯೋಗ, ಸಫಲತೆ

ಸಾಧನೆ : ಗುರಿ ಮುಟ್ಟುವುದು, ಸಾಧಿಸಿದುದು

ಸಾಧನ : ಸಲಕರಣೆ

ಸಾಮರಸ್ಯ : ಹೊಂದಾಣಿಕೆ,

ಸಾಹಿತ್ಯಕೃಷಿ : ಬರವಣಿಗೆಯ ಕ್ಷೇತ್ರದಲ್ಲಿ ತೊಡಗಿರುವುದು

ಸಿಡಿ : ಚಿಮ್ಮು, ನೆಗೆ, ಸ್ನಾಯುವಿನ ಸೆಳೆತ, ಸಿಟ್ಟಿಗೇಳು

ಸಿಡುಕು : ಸಿಟ್ಟಾಗು

ಸಿದ್ಧ : ಸಾಧಿಸಿದವ,

ಸಿರಿ : ಸಂಪತ್ತು.

ಸಿಲುಕು : ಸಿಕ್ಕಿಹಾಕಿಕೊಳ್ಳು

ಸುಗ್ಗಿ : ಚೈತ್ರಮಾಸ, ವಸಂತಕಾಲ, ಸಮೃದ್ಧಿ.

ಸೊಗ : ಸುಖ(ಸಂ), ಅಂದ, ಚೆಲುವು

ಸುಳಿ : ಚಕ್ರಾಕಾರವಾಗಿ ಸುತ್ತುವ ನೀರಿನ ಭಾಗ, ಕುಡಿ

ಸೊಗಸು : ಚೆಲುವು, ಸೌಂದರ್ಯ

ಸೋದರತೆ : ಸೋದರತ್ವ, ಒಡಹುಟ್ಟಿದವರ ಅನ್ಯೋನ್ಯತೆ

ಸೋರು : ಒಸರು, ತೊಟ್ಟಿಕ್ಕು

ಸ್ವಗತ : ತನ್ನಷ್ಟಕ್ಕೆ ಮಾತಾಡಿಕೊಳ್ಳುವುದು, ಇನ್ನೊಬ್ಬರನ್ನು ಉದ್ದೇಶಿಸಿ ಆಡಿದ ಮಾತಲ್ಲ

ಸ್ವತ್ತು : ವಸ್ತು, ಸಂಪತ್ತು

ಸೋಜಿಗ : ಆಶ್ಚರ್ಯ, ಬೆರಗು

## ಹ

ಹಂತ : ಸೋಪಾನ, ಮಜಲು.

ಹಮ್ಮು : ಅಹಂಕಾರ, ಹೆಮ್ಮೆ

ಹಿನ್ನಡೆ : ಹಿಂದೆ ಆಗುವುದು

ಹಿಮಗಿರಿ : ಹಿಮಾಲಯ

ಹೇಸು : ಅಸಹ್ಯಪಡು

ಹೈನು : ಹಯನು, ಹಾಲಿನ ಉತ್ಪನ್ನ.



**ಮಹಾನ್ ಸತ್ಯವೆಂದರೆ ಅದಕ್ಕೆ ವಿರುದ್ಧವಾದುದೇ ಇಲ್ಲ – ಥಾಮಸ್ ಮಾನ್.**